CPMG / KA / BG-GPO/13/2003-2005

ಸುವರ್ಣ ಕರ್ನಾಟಕ - 2006



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

ಸಂಪುಟ ೧೪೦ | ಬೆಂಗಳೂರು, ಗುರುವಾರ, ಡಿಸೆಂಬರ್ ೧೫, ೨೦೦೫ (ಮಾರ್ಗಶಿರ ೨೪, ಶಕ ವರ್ಷ ೧೯೨೭) | ಸಂಚಿಕೆ ೪೯

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಂಪನಿಗಳ (ನ್ಯಾಯಾಲಯ) ನಿಯಮ, 1959**

**ನಮೂನೆ ಸಂಖ್ಯೆ: 155**

**(ನಿಯಮ 329 ನೋಡಿ)**

**ಸದಸ್ಯರುಗಳ ಸ್ವ-ಇಚ್ಛೆಯಿಂದ ಸ್ಥಗಿತ**

**ಕಂಪನಿ ಹೆಸರು: ಎಕ್ಸೆಲ್ ಮೆನ್ಸ್‌ವೇರ್ ಪ್ರೈವೇಟ್ ಲಿಮಿಟೆಡ್**

**ಸಭೆ (ಅಂತಿಮ) ನಡೆಸುವ ಕುರಿತು ನೋಟೀಸು**

ಕಂಪನಿಯ ಕಾಯ್ದೆ 1956ರ 497/509ನೇ ವಿಧಿಯಂತೆ ಮೇಲೆ ಹೆಸರಿಸಿದ ಕಂಪನಿಯ ಸದಸ್ಯರುಗಳ ಸಾಮಾನ್ಯ ಸಭೆ ಕಂಪನಿಯ ನೋಂದಾಯಿತ ಕಛೇರಿ, 288, ದೊಡ್ಡ ಬೇಗೂರು, ಬೆಂಗಳೂರು ಸೌತ್, ಬೆಂಗಳೂರು-560 068 ಇಲ್ಲಿ 16ನೇ ಜನವರಿ, 2006 ಬೆಳಿಗ್ಗೆ 12.00 ಗಂಟೆಗೆ ಸ್ಥಗಿತಗೊಳಿಸಿ (ವೈಂಡಿಂಗ್ ಆಫ್) ರೀತಿಯ ಕುರಿತು ಲೆಕ್ಕಪತ್ರ ಹಾಜರುಪಡಿಸುವುದು ಮತ್ತು ಕಂಪನಿಯ ಆಸ್ತಿ-ಪಾಸ್ತಿ ವಿಲೇವಾರಿ ಮಾಡಿದ ಕ್ರಮ ಹಾಗೂ ಲಿಕ್ವಿಡೇಟರ್ ಕೊಡಬಹುದಾದ ವಿವರಣೆ ಆಲಿಸಲು ಮತ್ತು ಕಂಪನಿಯ ವಿಶೇಷ ಠರಾವಿನ ಪ್ರಕಾರ ಕಂಪನಿಯ ಮತ್ತು ಲಿಕ್ವಿಡೇಟರ್‌ನ ಕಡತಗಳು, ಲೆಕ್ಕ ಪತ್ರ ಮತ್ತು ದಾಖಲಾತಿಗಳನ್ನು ವಿಲೇವಾರಿ ಮಾಡುವುದರ ಸಂಬಂಧ ನಡೆಯಲಿದೆ ಎಂದು ಈ ಮೂಲಕ ನೋಟೀಸು ನೀಡಲಾಗಿದೆ.

**ಹೆಚ್.ಪಿ. ಪೈ**

ಲಿಕ್ವಿಡೇಟರ್.

**THE COMPANIES (COURT) RULES, 1959**

**FORM NO.155**

**(See Rule 329)**

**Members Voluntary Winding Up of M/s Excel Menswear Pvt. Ltd.**

**NOTICE CONVENING (FINAL) MEETING**

Notice is hereby given in pursuance of Section 497/509 of the Companies Act, 1956 that a General (Final) Meeting of the members of the above named Company will be held at its Regd. Office at No.288, Dodda Beguru, Bangalore South, Bangalore-560068 on Monday, the 16th January 2006 at 12.00 Noon for the purpose of having an account laid before them showing the manner in which the winding up has been conducted and the property of the company disposed off and of hearing any explanation that may be given by the liquidator and also determining by a Special Resolution of the Company, the manner in which the books, accounts and documents of the Company and of the Liquidator shall be disposed off.

**H.P. PAI**

PD-109

Liquidator.

**ಕಂಪನಿಗಳ (ನ್ಯಾಯಾಲಯ) ನಿಯಮ, 1959**
**ನಮೂನೆ ಸಂಖ್ಯೆ: 155**
**(ನಿಯಮ 329 ನೋಡಿ)**
**ಸದಸ್ಯರುಗಳ ಸ್ವ-ಇಚ್ಛೆಯಿಂದ ಸ್ಥಗಿತ**
**ಕಂಪನಿ ಹೆಸರು: ಆಕ್ಸ್‌ಫರ್ಡ್ ಫ್ಯಾಷನ್ಸ್ ಪ್ರೈವೇಟ್ ಲಿಮಿಟೆಡ್**
**ಸಭೆ (ಅಂತಿಮ) ನಡೆಸುವ ಕುರಿತು ನೋಟೀಸು**

ಕಂಪನಿಯ ಕಾಯ್ದೆ 1956ರ 497/509ನೇ ವಿಧಿಯಂತೆ ಮೇಲೆ ಹೆಸರಿಸಿದ ಕಂಪನಿಯ ಸದಸ್ಯರುಗಳ ಸಾಮಾನ್ಯ ಸಭೆ ಕಂಪನಿಯ ನೋಂದಾಯಿತ ಕಛೇರಿ, 62/2ಎ ಮತ್ತು 2ಬಿ, ಪರಪ್ಪನ ಅಗ್ರಹಾರ, ನಾಗನಾಥಪುರಂ, ಬೆಂಗಳೂರು-560 068 ಇಲ್ಲಿ 16ನೇ ಜನವರಿ, 2006 ಬೆಳಿಗ್ಗೆ 11.00 ಗಂಟೆಗೆ ಸ್ಥಗಿತಗೊಳಿಸಿ (ವೈಂಡಿಂಗ್ ಆಫ್) ರೀತಿಯ ಕುರಿತು ಲೆಕ್ಕಪತ್ರ ಹಾಜರುಪಡಿಸುವುದು ಮತ್ತು ಕಂಪನಿಯ ಆಸ್ತಿ-ಪಾಸ್ತಿ ವಿಲೇವಾರಿ ಮಾಡಿದ ಕ್ರಮ ಹಾಗೂ ಲಿಕ್ವಿಡೇಟರ್ ಕೊಡಬಹುದಾದ ವಿವರಣೆ ಆಲಿಸಲು ಮತ್ತು ಕಂಪನಿಯ ವಿಶೇಷ ಠರಾವಿನ ಪ್ರಕಾರ ಕಂಪನಿಯ ಮತ್ತು ಲಿಕ್ವಿಡೇಟರ್‌ನ ಕಡತಗಳು, ಲೆಕ್ಕ ಪತ್ರ ಮತ್ತು ದಾಖಲಾತಿಗಳನ್ನು ವಿಲೇವಾರಿ ಮಾಡುವುದರ ಸಂಬಂಧ ನಡೆಯಲಿದೆ ಎಂದು ಈ ಮೂಲಕ ನೋಟೀಸು ನೀಡಲಾಗಿದೆ.

**ಹೆಚ್.ಪಿ. ಪೈ**
ಲಿಕ್ವಿಡೇಟರ್.

**THE COMPANIES (COURT) RULES, 1959**
**FORM NO.155**
**(See Rule 329)**
**Members Voluntary Winding Up of M/s Oxford Fashions Pvt. Ltd.**
**NOTICE CONVENING (FINAL) MEETING**

Notice is hereby given in pursuance of Section 497/509 of the Companies Act, 1956 that a General (Final) Meeting of the members of the above named Company will be held at its Regd. Office at No.62/2A & 2B, Parappana Agrahara, Naganathapura, Bangalore-560068 on Monday, the 16th January 2006 at 11.00 A.M. for the purpose of having an account laid before them showing the manner in which the winding up has been conducted and the property of the company disposed off and of hearing any explanation that may be given by the liquidator and also determining by a Special Resolution of the Company, the manner in which the books, accounts and documents of the Company and of the Liquidator shall be disposed off.

Place: Bangalore **H.P. PAI**
PD-110 Liquidator.

**MYSORE MINERALS LIMITED**
**(Government of Karnataka Undertaking)**
**Regd. Office: 39, Mahatma Gandhi Road, Bangalore-560 001.**
**ಅಧಿಸೂಚನೆ**
**ಸಂಖ್ಯೆ: ಪಿಇಆರ್:276:ಜಿಇಎನ್:2005-06, ದಿನಾಂಕ: 21ನೇ ಸೆಪ್ಟೆಂಬರ್ 2005**

2005ರ ಮಾಹಿತಿ ಹಕ್ಕು ಕಾಯ್ದೆ (2005ರ ಕಾಯ್ದೆ ಸಂಖ್ಯೆ: 22) ಸೆಕ್ಷನ್ 5(1)ರ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು ಮೈಸೂರು ಮಿನರಲ್ಸ್ ಲಿಮಿಟೆಡ್ ಸಂಸ್ಥೆಗೆ ಸಂಬಂಧಿಸಿದಂತೆ ಮುಖ್ಯ ಆಡಳಿತ ಮತ್ತು ಜಾಗೃತಾಧಿಕಾರಿ, ಮೈಸೂರು ಮಿನರಲ್ಸ್ ಲಿಮಿಟೆಡ್ ಇವರನ್ನು "ರಾಜ್ಯ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಲಾಗಿದೆ.

ಮೇಲ್ಕಂಡ 2005ರ ಮಾಹಿತಿ ಹಕ್ಕು ಅಧಿನಿಯಮ ಸೆಕ್ಷನ್ 5(2)ರ ಅಡಿಯಲ್ಲಿ ಮೈಸೂರು ಮಿನರಲ್ಸ್ ಲಿಮಿಟೆಡ್‌ಗೆ ಸಂಬಂಧಿಸಿದಂತೆ ಕೆಳಕಂಡ ಅಧಿಕಾರಿಗಳನ್ನು "ರಾಜ್ಯ ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ" ಎಂದು ನೇಮಕ ಮಾಡಲಾಗಿದೆ.

1) ವ್ಯವಸ್ಥಾಪಕರು,
ಮೈಸೂರು ಮಿನರಲ್ಸ್ ಲಿಮಿಟೆಡ್, ಚಾಮರಾಜನಗರ ಡೈಕ್ ಏರಿಯಾ,
ಸೇಂಟ್ ಜೋಸೆಫ್ ಕಾನ್ವೆಂಟ್ ಎದುರು, ಚಾಮರಾಜನಗರ - 571 313, ದೂರವಾಣಿ ನಂ.9581226 222004.

2) ವ್ಯವಸ್ಥಾಪಕರು,
ಮೈಸೂರು ಮಿನರಲ್ಸ್ ಲಿಮಿಟೆಡ್, ಕಾರ್ಯ ಮ್ಯಾಗ್ನಸೈಟ್ ಗಣಿ,
ಹುಲ್ಲಹಳ್ಳಿ ಅಂಚೆ - 571 314, ನಂಜನಗೂಡು ತಾಲ್ಲೂಕು, ಮೈಸೂರು ಜಿಲ್ಲೆ, ದೂರವಾಣಿ ನಂ.9581221 220158.

3) ವ್ಯವಸ್ಥಾಪಕರು,
ಮೈಸೂರು ಮಿನರಲ್ಸ್ ಲಿಮಿಟೆಡ್, ಕೆಬ್ಬೇಹಳ್ಳಿ ಶಿಲಾ ಗಣಿ, ನಾರಾಯಣಪುರ ಅಂಚೆ,
ಕನಕಪುರ ತಾಲ್ಲೂಕು, ಬೆಂಗಳೂರು ಜಿಲ್ಲೆ - 562 117, ದೂರವಾಣಿ ನಂ.7524938 124940 ಪಿಪಿ.

4) ವ್ಯವಸ್ಥಾಪಕರು,
ಮೈಸೂರು ಮಿನರಲ್ಸ್ ಲಿಮಿಟೆಡ್, ತಗಡೂರು ಕ್ರೋಮೈಟ್ ಗಣಿ, ಭುವನಹಳ್ಳಿ ಅಂಚೆ,
ನುಗ್ಗೇಹಳ್ಳಿ ಮಾರ್ಗ, ಚನ್ನರಾಯಪಟ್ಟಣ ತಾಲ್ಲೂಕು, ಹಾಸನ ಜಿಲ್ಲೆ, 573 131,
ದೂರವಾಣಿ ನಂ. 9581762 80359.

5) ವ್ಯವಸ್ಥಾಪಕರು,
ಮೈಸೂರು ಮಿನರಲ್ಸ್ ಲಿಮಿಟೆಡ್, ಸೂಪ ಗಣಿ ಯೋಜನೆ, ಜೆ.ಎನ್. ರಸ್ತೆ,
ದಾಂಡೇಲಿ - 581 325, ದೂರವಾಣಿ ನಂ.958284 231386.

6) ವ್ಯವಸ್ಥಾಪಕರು,
ಮೈಸೂರು ಮಿನರಲ್ಸ್ ಲಿಮಿಟೆಡ್, ಕಲಾದಗಿ ಸುಣ್ಣದಕಲ್ಲಿನ ಗಣಿ,
ಕಸಟ್ ಬಿಲ್ಡಿಂಗ್, ಬಿ.ವಿ.ಎಸ್. ಇಂಜಿನಿಯರಿಂಗ್ ಕಾಲೇಜ್, ಹಾಸ್ಟಲ್ ರಸ್ತೆ,
ವಿದ್ಯಾಗಿರಿ (ಜಿ.ಆರ್.ಬಿ.ಸಿ.) ಬಾಗಲಕೋಟೆ ಜಿಲ್ಲೆ - 587 102. ದೂರವಾಣಿ ನಂ.9583542 40147

7) ವ್ಯವಸ್ಥಾಪಕರು,
ಮೈಸೂರು ಮಿನರಲ್ಸ್ ಲಿಮಿಟೆಡ್, ಸುಬ್ಬರಾಯನಹಳ್ಳಿ ಕಬ್ಬಿಣ ಅದಿರು ಗಣಿ,
ಸಂಡೂರು ತಾಲ್ಲೂಕು, ಬಳ್ಳಾರಿ ಜಿಲ್ಲೆ - 583 119, ದೂರವಾಣಿ ನಂ.9583952 60401.

2005 ಮಾಹಿತಿ ಹಕ್ಕು ಕಾಯ್ದೆ ಸೆಕ್ಷನ್ 19(1)ರ ಅಡಿಯಲ್ಲಿ ವ್ಯವಸ್ಥಾಪಕ ನಿರ್ದೇಶಕರು, ಮೈಸೂರು ಮಿನರಲ್ಸ್ ಲಿಮಿಟೆಡ್ ಇವರನ್ನು ಕಾಯ್ದೆ ಅಡಿಯಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಲು "ಮೇಲ್ಮನವಿ ಪ್ರಾಧಿಕಾರ" ಎಂದು ನೇಮಕ ಮಾಡಲಾಗಿದೆ.

ಪಿ.ಡಿ. 107 ವ್ಯವಸ್ಥಾಪಕ ನಿರ್ದೇಶಕರು.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಅಭಿಯಂತರರು(ವಿ), ಬೃ.ಕಾ.ವಿಭಾಗ, ಕವಿಪ್ರನಿನಿ, ನೆಹರು ನಗರ, ಬೆಳಗಾವಿ.**

**ಪ್ರಕಟಣೆ ಸಂಖ್ಯೆ: 606/ಬೆಂ/ಕಾನಿಇಂ/ಬೃಕಾವಿ/ಸಕಾನಿಇಂ/2449-97, ದಿನಾಂಕ: 17ನೇ ಅಕ್ಟೋಬರ್ 2005**

1948 ಅಧಿನಿಯಮ ಭಾರತ ವಿದ್ಯುಚ್ಛಕ್ತಿ 29(1) ಅಡಿಯಲ್ಲಿ ಮಂಜೂರಾತಿಯಾದ ಯೋಜನೆಯನ್ನು ಈ ಮೂಲಕ ಪ್ರಕಟಿಸಲಾಗಿದೆ.

1948 ವಿದ್ಯುತ್ ಸರಬರಾಜು ಕಾಯಿದೆ ಅನುಬಂಧ 28ರ ಅಡಿಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣ ನಿಗಮ ನಿಯಮಿತ ಯೋಜನೆಯನ್ನು ರೂಪಿಸಿದ್ದು ಕಾಯಿದೆ. ಅನುಬಂಧ 29(1) ಅಡಿಯಲ್ಲಿ ಪರವಾನಿಗೆ ಹೊಂದಿದ ಹಾಗೂ ಆಸಕ್ತ ವ್ಯಕ್ತಿಗಳ ಮಾಹಿತಿಗಾಗಿ ಯೋಜನೆಯ ವಿವರಗಳು ಈ ಕೆಳಗಿನಂತಿದೆ.

**ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಚಿಕ್ಕೋಡಿ ತಾಲ್ಲೂಕಿನ ಬೋಜ, (ಗಳತಗಾ) ದಲ್ಲಿ ನಿರ್ಮಿಸಲು ಯೋಜಿಸಲಾದ 110 ಕೆವ್ಹಿ ವಿದ್ಯುತ್ ಕೇಂದ್ರಕ್ಕೆ ಚಿಕ್ಕೋಡಿ 220 ಕೆವ್ಹಿ ವಿದ್ಯುತ್ ಕೇಂದ್ರದಿಂದ ಬೋಜ (ಗಳತಗಾ) ವರೆಗೆ ಜೋಡಿಗೋಪುರದ ಮೇಲೆ, ಒಂಟಿ ಪ್ರಸರಣಾ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೆಜನ್ನು ಸುಧಾರಿಸುವುದು ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದು ಹೋಗುವ ಪ್ರದೇಶ:** ಹೀರೆಕೋಡಿ, ತಂಗ್ಯಾನಕೋಡಿ, ನಗರಾಳ, ಶಿರಗಾಂವ, ಶಿರಗಾಂವವಾಡಿ, ನೇಜ, ಗಳತಗಾ ಹಾಗೂ ಅಕ್ಕ ಪಕ್ಕ ಹದ್ದಿಯಲ್ಲಿ ಬರುವ ಹಳ್ಳಿಗಳು.

ಮೇಲಿನ ಯೋಜನೆಗಳನ್ನು ನಿರ್ವಹಿಸಲು 1885ರ ಭಾರತೀಯ ಟೆಲಿಗ್ರಾಫ್ ಕಾಯಿದೆ (1885ರ 13) ಭಾಗ-3 ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಪಡೆದುಕೊಂಡಿರುವ ಎಲ್ಲಾ ಅಧಿಕಾರವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು ಯೋಜನೆಗಳ ಬಗ್ಗೆ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ, ವಿಭಾಗ, ನೆಹರು ನಗರ, ಬೆಳಗಾವಿ-10 ಇವರಿಗೆ ಪ್ರಕಟಣೆ ಪ್ರಕಟವಾದ ದಿನಾಂಕದಿಂದ 2 ತಿಂಗಳ ಒಳಗೆ ತಲುಪುವಂತೆ ಕಳುಹಿಸಿಕೊಡಬೇಕು.

ಕಾರ್ಯನಿರ್ವಾಹಕ ಅಭಿಯಂತರರು(ವಿ),
ಪಿ.ಡಿ. 103 ಬೃ.ಕಾ.ವಿಭಾಗ, ಕವಿಪ್ರನಿನಿ, ನೆಹರು ನಗರ, ಬೆಳಗಾವಿ.

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಅಭಿಯಂತರರು(ವಿದ್ಯುತ್), ಬೃಹತ್ ಕಾಮಗಾರಿ ವಿಭಾಗ ಕಛೇರಿ, ಕ.ವಿ.ಪ್ರ.ನಿ.ನಿ., ನಂದವಾಡಗಿ ಕಟ್ಟಡ, ರೂಪಲ್ಯಾಂಡ್, ವಿದ್ಯಾಗಿರಿ, ಬಾಗಲಕೋಟೆ-587102**

**ಪ್ರಕಟಣೆ ಸಂಖ್ಯೆ: 614/ಕಾನಿಅ(ವಿ)/ಬೃಕಾವಿ/ಬಾಕೋ/2325-27, ದಿನಾಂಕ: 6ನೇ ಅಕ್ಟೋಬರ್ 2005**

1948 ಅಧಿನಿಯಮ ಭಾರತ ವಿದ್ಯುಚ್ಛಕ್ತಿ 29(1) ಅಡಿಯಲ್ಲಿ ಮಂಜೂರಾತಿಯಾದ ಯೋಜನೆಗಳನ್ನು ಈ ಮೂಲಕ ಪ್ರಕಟಿಸಲಾಗಿದೆ. 1948 ವಿದ್ಯುತ್ ಸರಬರಾಜು ಕಾಯಿದೆ ಅನುಬಂಧ 28ರ ಅಡಿಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣ ನಿಗಮ ನಿಯಮಿತ ಯೋಜನೆಯನ್ನು ರೂಪಿಸಿದ್ದು ಕಾಯಿದೆ ಅನುಬಂಧ 29(1)ರ ಅಡಿಯಲ್ಲಿ ಪರವಾನಿಗೆ ಹೊಂದಿದ ಹಾಗೂ ಆಸಕ್ತ ವ್ಯಕ್ತಿಗಳ ಮಾಹಿತಿಗಾಗಿ ಯೋಜನೆಯ ವಿವರಗಳು ಈ ಕೆಳಗಿನಂತಿದೆ.

**1) ಯೋಜನೆಯ ಹೆಸರು:** ಬಾಗಲಕೋಟೆ ಜಿಲ್ಲೆ: ಬಾಗಲಕೋಟ ತಾಲ್ಲೂಕಿನ ಅಚನೂರ ಗ್ರಾಮದಲ್ಲಿ ನೂತನವಾಗಿ ಕಾಮಗಾರಿ ಕೈಗೊಳ್ಳಲಾಗುವ 110 ಕೆ.ವ್ಹಿ. ವಿದ್ಯುತ್ ಉಪ ಕೇಂದ್ರಕ್ಕೆ ಈಗಿರುವ 110 ಕೆ.ವ್ಹಿ. ಬಾಗಲಕೋಟೆ-ಬಸವನ ಬಾಗೇವಾಡಿ ಮಾರ್ಗದಿಂದ ಟ್ಯಾಪ್ ಮಾಡಿ ಅಚನೂರ 110 ಕೆ.ವ್ಹಿ. ಉಪ ಕೇಂದ್ರಕ್ಕೆ ಜೋಡಿ ಗೋಪುರದ ಮೇಲೆ ಪ್ರಸರಣ ಮಾರ್ಗವನ್ನು ಜೋಡಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೆಜನ್ನು ಸುಧಾರಿಸುವುದು. ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದು ಹೋಗುವ ಪ್ರದೇಶ:** ಹಳ್ಳೂರ ಮತ್ತು ಅಚನೂರ ಗ್ರಾಮದ ಸರಹದ್ದು.

**2) ಯೋಜನೆಯ ಹೆಸರು:** ಬಾಗಲಕೋಟೆ ಜಿಲ್ಲೆ, ಮುಧೋಳ ತಾಲ್ಲೂಕಿನ ಮಂಟೂರ ಗ್ರಾಮದಲ್ಲಿ ನೂತನವಾಗಿ ಕಾಮಗಾರಿ ಕೈಗೊಳ್ಳಲಾಗುವ 110 ಕೆ.ವ್ಹಿ. ವಿದ್ಯುತ್ ಉಪ ಕೇಂದ್ರಕ್ಕೆ ಈಗಿರುವ 110 ಕೆ.ವ್ಹಿ. ಮಹಾಲಿಂಗಪುರ - ಮುಧೋಳ ಮಾರ್ಗದಿಂದ ಟ್ಯಾಪ್ ಮಾಡಿ ಮಂಟೂರ 110 ಕೆ.ವ್ಹಿ. ಉಪ ಕೇಂದ್ರಕ್ಕೆ ಜೋಡಿ ಗೋಪುರದ ಮೇಲೆ ಒಂಟಿ ಪ್ರಸರಣ ಮಾರ್ಗವನ್ನು ಜೋಡಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು. ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

ಹಾದು ಹೋಗುವ ಪ್ರದೇಶ: ಮಂಟೂರ, ಮುಧೋಳ ಮತ್ತು ಬುದ್ನಿ ಗ್ರಾಮಗಳ ಸರಹದ್ದು.

3) **ಯೋಜನೆಯ ಹೆಸರು:** ಬಿಜಾಪುರ ಜಿಲ್ಲೆಯ ಬಸವನ ಬಾಗೇವಾಡಿ ತಾಲ್ಲೂಕಿನ ಮಟ್ಟಿಹಾಳ ಗ್ರಾಮದಲ್ಲಿ ನೂತನವಾಗಿ ಕಾಮಗಾರಿ ಕೈಗೊಳ್ಳಲಾಗುವ 110 ಕೆ.ವ್ಹಿ. ವಿದ್ಯುತ್ ಉಪಕೇಂದ್ರಕ್ಕೆ ಈಗಿರುವ 110 ಕೆ.ವ್ಹಿ. ಬಸವನ ಬಾಗೇವಾಡಿ - ಮಮದಾಪುರ ಮಾರ್ಗದಿಂದ ಟ್ಯಾಪ್ ಮಾಡಿ ಮಟ್ಟಿಹಾಳ 110 ಕೆ.ವ್ಹಿ. ಉಪ ಕೇಂದ್ರಕ್ಕೆ ಜೋಡಿ ಗೋಪುರದ ಮೇಲೆ ಒಂಟಿ ಪ್ರಸರಣ ಮಾರ್ಗವನ್ನು ಜೋಡಿಸುವುದು.

**ಪ್ರಮುಖ ಲಕ್ಷಣಗಳು:** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೆಜನ್ನು ಸುಧಾರಿಸುವುದು. ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದು ಹೋಗುವ ಪ್ರದೇಶ:** ಮಲಘಾಣೆ, ರೋಣಿಹಾಳ, ಕೋಲ್ಹಾರ ಮತ್ತು ಮಟ್ಟಿಹಾಳ ಗ್ರಾಮದ ಸರಹದ್ದುಗಳು.

ಮೇಲಿನ ಯೋಜನೆಗಳನ್ನು ನಿರ್ವಹಿಸಲು 1885ರ ಭಾರತೀಯ ಟೆಲಿಗ್ರಾಫ್ ಕಾಯಿದೆ (1885ರ 13) ಭಾಗ-3 ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಪಡೆದುಕೊಂಡಿರುವ ಎಲ್ಲಾ ಅಧಿಕಾರವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಯೋಜನೆಗಳ ಬಗ್ಗೆ ಆಕ್ಷೇಪಣೆಗಳು ಏನಾದರೂ ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ, ವಿಭಾಗ, ರೂಪಲ್ಯಾಂಡ್, ನಂದವಾಡಗಿ ಕಟ್ಟಡ ಬಾಗಲಕೋಟೆ - 587102 ಇವರಿಗೆ ಪ್ರಕಟಣೆ ಪ್ರಕಟವಾದ ದಿನಾಂಕದಿಂದ ಎರಡು ತಿಂಗಳ ಒಳಗೆ ತಲುಪುವಂತೆ ಕಳುಹಿಸಿಕೊಡಬೇಕು.

ಕಾರ್ಯನಿರ್ವಾಹಕ ಅಭಿಯಂತರರು(ವಿ),
ಬೃಹತ್ ಕಾಮಗಾರಿ ವಿಭಾಗ ಕ.ವಿ.ಪ್ರ.ನಿ.ನಿ., ರೂಪಲ್ಯಾಂಡ್,
ನಂದವಾಡಗಿ ಕಟ್ಟಡ, ಬಾಗಲಕೋಟೆ.

ಪಿ.ಡಿ. 104

## ಕರ್ನಾಟಕ ನೀರಾವರಿ ನಿಗಮ ನಿಯಮಿತ
## (ಕರ್ನಾಟಕ ಸರ್ಕಾರದ ಉದ್ಯಮ)
## ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರರ ಕಛೇರಿ, ಕೊಳಚಿ ಕಾಲುವೆ ಉಪ ವಿಭಾಗ, ಕೊಣ್ಣೂರು, ನರಗುಂದ ತಾಲ್ಲೂಕು, ಗದಗ್ ಜಿಲ್ಲೆ

**ಸಂಖ್ಯೆ: ಕೆಸಿಎಸ್:ಇತರೆ:05-06/276, ದಿನಾಂಕ: 15ನೇ ಸೆಪ್ಟೆಂಬರ್ 2005**

ಕರ್ನಾಟಕ ಮಾಹಿತಿ ಪಡೆಯಲು ಹಕ್ಕು ಅಧಿನಿಯಮ 2000ರ 3ನೇ ಪ್ರಕರಣದ (ಬ) ಖಂಡದಡಿಯಲ್ಲಿ ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು ಕನೀನಿ ಕೊಳಚಿ ಕಾಲುವೆ ಉಪ ವಿಭಾಗ ಕೊಣ್ಣೂರು ಕಛೇರಿಯ ವಿವರ ಪ್ರಕಟಣೆ.

**ರಚನೆ ಪ್ರಕಾರ್ಯಗಳ ಮತ್ತು ಕರ್ತವ್ಯಗಳ ವಿವರ:**

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಕನೀನಿ ಕೊಳಚಿ ಕಾಲುವೆ ಉಪ ವಿಭಾಗ ಕೊಣ್ಣೂರು ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. ಪ್ರಸ್ತುತ ಶ್ರೀ ರಮೇಶ ಎನ್. ಪವಾರ, ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು ಈ ಕಛೇರಿಯ ಪ್ರಭಾರವನ್ನು ಹೊಂದಿರುವರು ಸಹಾಯಕ ಇಂಜಿನೀಯರು ಹುದ್ದೆ ಖಾಲಿ ಇರುತ್ತದೆ. ಒಬ್ಬರು ಗುತ್ತಿಗೆ ಆಧಾರದ ಮೇಲೆ ಒಬ್ಬರು ಕಿರಿಯ ಇಂಜಿನೀಯರು ತಾತ್ಕಾಲಿಕ ಮಂಜೂರಾದ ಹುದ್ದೆಯಲ್ಲಿ ಮತ್ತು 'ಸಿ' ಹಾಗೂ 'ಡಿ' ವರ್ಗದ ನೌಕರರು ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು ಕನೀನಿ ಕೊಳಚಿ ಕಾಲುವೆ ಉಪ ವಿಭಾಗ ಕೊಣ್ಣೂರು ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವರು.

1. **ಕಛೇರಿಯ ಕಾರ್ಯಗಳು ಈ ಕೆಳಗಿನಂತಿವೆ.**

ಅ) ಈ ಉಪ ವಿಭಾಗವು ಸಂಪೂರ್ಣವಾಗಿ ನೀರು ನಿರ್ವಹಣೆ ಉಪ ವಿಭಾಗವಿದ್ದು ಇದರ ಅಡಿಯಲ್ಲಿ ಸುಮಾರು 5,033 ಹೆಕ್ಟೇರು ಜಮೀನುಗಳಿಗೆ ನೀರು ಸರಬರಾಜು ವ್ಯವಸ್ಥೆ ಹಾಗೂ ಉಸ್ತುವಾರಿ ಕೆಲಸ ಇರುವುದು.

ಬ) ಕೊಳಚಿ ಕಾಲುವೆ ಮೈಲ ಸಂಖ್ಯೆ: 0 ರಿಂದ 49ರ ವರೆಗೆ ಒಟ್ಟು 49 ಮೈಲುಗಳ ಉಸ್ತುವಾರಿ ಕೆಲಸ ಹಾಗೂ ಹಂಚು ಕಾಲುವೆ 0 ದಿಂದ 27ರ ವರೆಗೆ ಉಸ್ತುವಾರಿ ಹಾಗೂ ರೈತರುಗಳ ಜಮೀನುಗಳಿಗೆ ಸಮರ್ಪಕ ರೀತಿಯಲ್ಲಿ ನೀರು ನಿರ್ವಹಣೆ ಕೆಲಸ ಮಾಡುವುದು.

ಕ) ಈ ಉಪ ವಿಭಾಗದ ಕಕ್ಷೆಯಲ್ಲಿ ಈಗಾಗಲೇ 7 ನೀರು ಬಳಕೆದಾರರ ಸಹಕಾರಿ ಸಂಘಗಳು ಸ್ಥಾಪನೆಯಾಗಿದ್ದು ಇರುತ್ತದೆ. ಸಂಬಂಧಿಸಿದ ನೀರು ಬಳಕೆದಾರರ ಸಹಕಾರಿ ಸಂಘಗಳ ವತಿಯಿಂದ ಕಾಲುವೆಗಳ ಕೆಲಸ, ನಮ್ಮ ಹೊಲ ನಮ್ಮ ರಸ್ತೆ ಹಾಗೂ ರಸ್ತೆ ಉಸ್ತುವಾರಿ ಮಾಡಲಾಗುವುದು. ಇದರೊಂದಿಗೆ ಕೊಣ್ಣೂರು ವಸತಿ ಗೃಹಗಳ ಹಾಗೂ ಸುರೇಬಾನ ಗ್ರಾಮದ ಕಾಲನಿಯ ಉಸ್ತುವಾರಿ ಕೆಲಸಗಳ ಮೇಲ್ವಿಚಾರಣೆ, ಯಂತ್ರೋಪಕರಣ ವಾಹನಗಳ ಮೇಲ್ವಿಚಾರಣೆ ಹಾಗೂ ಇನ್ನಿತರ ಈ ಕಛೇರಿಗೆ ಸಂಬಂಧಿಸಿದ ಕೆಲಸಗಳ ಮೇಲ್ವಿಚಾರಣೆ ಮಾಡುವುದು.

ಈ ಉಪ ವಿಭಾಗದ ಅಡಿ ಬರುವ ಈ ಕೆಳಗಿನ ಏತ ನೀರಾವರಿ ಯೋಜನೆಗಳ ನಿರ್ವಹಣೆ ಮಾಡಬಹುದಾದ ಕೆಲಸಗಳು.

1. ಬೆಣ್ಣೆಹಳ್ಳ ಅಸೂಟಿ ಏತ ನೀರಾವರಿ ಯೋಜನೆ

ಡ) ಈ ಉಪ ವಿಭಾಗದ ಯೋಜನೆಗಳ ಕಾಮಗಾರಿಗಳಿಗೆ ಸಂಬಂಧಿಸಿದಂತೆ ಅನುದಾನ ವೆಚ್ಚದ ಪತ್ರ ವ್ಯವಹಾರ ಆಯವ್ಯಯ ಸಾರ್ವಜನಿಕ ಲೆಕ್ಕ ಪತ್ರ ಸಮಿತಿ ವಿಷಯ, ಅಂದಾಜು ಸಮಿತಿ ಹಾಗೂ ಇತರೆ ತಾಂತ್ರಿಕ ಹಾಗೂ ಆಡಳಿತ ವಿಷಯಗಳಿಗೆ ಸಂಬಂಧಿಸಿದ ಮಾಹಿತಿಯನ್ನು ಕಾರ್ಯನಿರ್ವಾಹಕ ಇಂಜಿನೀಯರು ಕನೀನಿ ಮಬದಕಾನಿ ವಿಭಾಗ ನಂ:1 ನರಗುಂದ ಇವರಿಗೆ ಒದಗಿಸುವುದು.

2. ಅಧಿಕಾರಿಗಳ ಕರ್ತವ್ಯಗಳು ಹಾಗೂ ನಿರ್ವಹಿಸುತ್ತಿರುವ ವಿಷಯಗಳ ವಿವರಗಳು:

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ **ಶ್ರೀಯುತ:** | ನಿರ್ವಹಿಸುತ್ತಿರುವ ಕರ್ತವ್ಯಗಳ ವಿಷಯಗಳು | ದೂರವಾಣಿ ಸಂಖ್ಯೆ |
|---|---|---|---|
| 1 | 2 | 3 | 4 |
| 1 | ರಮೇಶ ಎನ್. ಪವಾರ, ಸಕಾನಿಇಂ. | ಉಪ ವಿಭಾಗದ ಎಲ್ಲ ವಿಷಯಗಳ ಪ್ರಭಾರ | 266305 |

| ಕ್ರ.ಸಂ. | ಅಧಿಕಾರಿಯ ಹೆಸರು ಮತ್ತು ಪದನಾಮ<br>**ಶ್ರೀಯುತ:** | ನಿರ್ವಹಿಸುತ್ತಿರುವ ಕರ್ತವ್ಯಗಳ ವಿಷಯಗಳು | ದೂರವಾಣಿ ಸಂಖ್ಯೆ |
|---|---|---|---|
| 2 | ವೈ.ಬಿ. ಪಾತ್ರೋಟಿ, ಸಇಂ. | ಉಪ ವಿಭಾಗದ ಹಂಚಿಕೆಗಳು ನೀರು ನಿರ್ವಹಣೆ ಹಾಗೂ ಕೆಲಸಗಳ ಉಸ್ತುವಾರಿ ಮಾಡುವುದು. | |
| 3 | ಎಂ.ವಿ. ನಾಗೂರ, ಕಿಇಂ. | - ಸದರ - | |

ಉಪ ವಿಭಾಗ ಕಛೇರಿಯ ಅಧಿಕಾರಿಗಳು ಹಾಗೂ ಸಿಬ್ಬಂದಿಗಳು ಕಛೇರಿಯ ಕೈಪಿಡಿಯ ಮತ್ತು ಕಛೇರಿ ಕಾರ್ಯವಿಧಾನಗಳಲ್ಲಿ ಹಾಗೂ ಸಂಬಂಧಿಸಿದ ನಿಯಮಗಳಲ್ಲಿ ವಿಧಿಸಲಾದ ಕಾರ್ಯವಿಧಾನಕ್ಕೆ ಅನುಸಾರವಾಗಿ ಕರ್ತವ್ಯಗಳನ್ನು ನಿರ್ವಹಿಸುತ್ತಾರೆ.

3. ಕರ್ನಾಟಕ ಮಾಹಿತಿ ಹಕ್ಕು ಅಧಿನಿಯಮ 2000ರ ಪ್ರಕರಣ (2) ಖಂಡ (ಎ) 'ಸಿ' ಹಾಗೂ ಪ್ರಕರಣ "7"ರ ಪ್ರಕಾರ ಈ ಉಪ ವಿಭಾಗ ಕಛೇರಿಗಳಿಗೆ ಸಂಬಂಧಿಸಿದ ಈ ಕೆಳಕಂಡ ಪ್ರಾಧಿಕಾರಿಗಳನ್ನು ನಿಗದಿಗೊಳಿಸಲಾಗಿದೆ.

| | | |
|---|---|---|
| ಪ್ರಕರಣ (2) ಖಂಡ "ಸಿ" | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಕನೀನಿ ಕೊಳಚಿ ಕಾಲುವೆ ಉಪ ವಿಭಾಗ, ಕೊಣ್ಣೂರು. | ಸಾರ್ವಜನಿಕ ಪ್ರಾಧಿಕಾರಿ |
| ಪ್ರಕರಣ (2) ಖಂಡ "ಎ" | ಕಾರ್ಯನಿರ್ವಾಹಕ ಇಂಜಿನೀಯರು ಕನೀನಿ ಮಬದಕಾನಿ ವಿಭಾಗ, ನಂ.1, ನರಗುಂದ | ಸಕ್ಷಮ ಪ್ರಾಧಿಕಾರಿ |
| ಪ್ರಕರಣ (7) | ಅಧೀಕ್ಷಕ ಇಂಜಿನೀಯರರು, ಕನೀನಿನಿ ಮಬದಕಾನಿ ವೃತ್ತ, ಧಾರವಾಡ.<br>ಮುಖ್ಯ ಇಂಜಿನೀಯರರು, ಕನೀನಿನಿ, ನೀರಾವರಿ, (ಉತ್ತರ) ವಲಯ ಬೆಳಗಾವಿ. | ಮೇಲ್ಮನವಿ ಪ್ರಾಧಿಕಾರ<br>" " |

**ರಮೇಶ್ ಎನ್ ಪವಾರ**
ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು,
ಕನೀನಿನಿ ಕೊಳಚಿ ಕಾಲುವೆ ಉಪ ವಿಭಾಗ, ಕೊಣ್ಣೂರು, ನರಗುಂದ ತಾ:, ಗದಗ್ ಜಿಲ್ಲೆ.

**ಸಂಖ್ಯೆ: ಕೆಸಿಎಸ್/ಸಿ-2/2005-06/357 ದಿನಾಂಕ: 14.11.2005**

**ಕಛೇರಿ ಸೂಚನಾ ಫಲಕದಲ್ಲಿ ಕಾಯ್ದೆಯಡಿ ಗುರುತಿಸಲಾದ ಸಕ್ಷಮ/ಅಪೀಲು ಪ್ರಾಧಿಕಾರಗಳ ಹಾಗೂ ಅಭಿವೃದ್ಧಿ ಕಾರ್ಯಕ್ರಮಗಳ ವಿವರಗಳನ್ನು ಪ್ರಕಟಿಸುವ ನಮೂನೆ**

**ಭಾಗ-1**

**ಮಾಹಿತಿ ಹಕ್ಕು ಅಧಿನಿಯಮ ಕಾಯ್ದೆ 2000**

**ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರವರು, ಕನೀನಿನಿ, ಕೊಳಚಿ ಕಾಲುವೆ ಉಪ ವಿಭಾಗ, ಕೊಣ್ಣೂರು, ತಾಲ್ಲೂಕು: ನರಗುಂದ, ಜಿಲ್ಲಾ: ಗದಗ್ ರವರ ಕಛೇರಿ ಕರ್ನಾಟಕ ನೀರಾವರಿ ನಿಗಮ ನಿಯಮಿತ ಮಾಹಿತಿ ಹಕ್ಕು ಅಧಿನಿಯಮ 2000ದ ಅಡಿಯಲ್ಲಿ ಈ ಕಛೇರಿಯಿಂದ ನೀವು ದಾಖಲಾತಿಗಳನ್ನು ಪಡೆಯಬಹುದು**

1. ದಾಖಲಾತಿಯನ್ನು 15 ದಿನಗಳಲ್ಲಿ ನೀಡಲಾಗುವುದು (ರಜೆ ದಿನಗಳನ್ನು ಹೊರತುಪಡಿಸಿ)
2. ಈ ಕಛೇರಿಯಲ್ಲಿ ಮಾಹಿತಿ/ದಾಖಲೆಗಳನ್ನು ನೀಡುವ ಅಧಿಕಾರಿ.

(ಸಕ್ಷಮ ಪ್ರಾಧಿಕಾರ)

| ಅಧಿಕಾರಿಯ ಹೆಸರು | ಪದನಾಮ |
|---|---|
| ಶ್ರೀ ಆರ್.ಎನ್. ಪವಾರ | ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು, ಕನೀನಿ ಕೊಳಚಿ ಕಾಲುವೆ ಉಪವಿಭಾಗ, ಕೊಣ್ಣೂರು |

3. ಮಾಹಿತಿಯನ್ನು 15 ದಿನಗಳ ಒಳಗೆ ನೀಡದಿದ್ದ ಪಕ್ಷದಲ್ಲಿ ಮೇಲ್ಮನವಿ ಸಲ್ಲಿಸಬೇಕಾದ ಅಧಿಕಾರಿಯ ವಿವರಗಳು:

| ಅಧಿಕಾರಿಯ ಹೆಸರು | ಪದನಾಮ |
|---|---|
| ಶ್ರೀ ಎಸ್.ಐ. ಸವಣೂರ | ಕಾರ್ಯನಿರ್ವಾಹಕ ಇಂಜಿನೀಯರು, ಕನೀನಿ ಮಬದಕಾನಿ ವಿಭಾಗ, ಸಂ: 1, ನರಗುಂದ |

4. ಮೇಲಿನ ಅಧಿಕಾರಿಗಳು ಸಹಕರಿಸದೇ ಇದ್ದಲ್ಲಿ ದೂರನ್ನು ಈ ಕೆಳಕಂಡ ಅಧಿಕಾರಿಗೆ ನೀಡಬಹುದು.
   ಪ್ರಧಾನ ಕಾರ್ಯದರ್ಶಿಗಳು, ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ, (ಜನಸ್ಪಂದನ) 20ನೇ ಮಹಡಿ,
   ವಿ.ವಿ.ಕೇಂದ್ರ, ಅಂಬೇಡ್ಕರ್ ರಸ್ತೆ, ಬೆಂಗಳೂರು-560001.
5. ಈ ಕಾಯ್ದೆಯ ಅಧಿನಿಯಮ ಮತ್ತು ನಿಯಮಗಳ ಪಟ್ಟಿಗಳು ಸರ್ಕಾರಿ ಮುದ್ರಣಾಲಯ, ಬೆಂಗಳೂರು ಹಾಗೂ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ಅಂಗೀಕೃತ ಪುಸ್ತಕ ವ್ಯಾಪಾರಿಗಳಲ್ಲಿ ಮಾರಾಟಕ್ಕೆ ದೊರೆಯುತ್ತದೆ. ಈ ಮಾಹಿತಿ **http://Kar.nic.in/vsb** ವೆಬ್ ಸೈಟಿನಲ್ಲಿ ಲಭ್ಯವಿರುತ್ತದೆ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು,
ಕನೀನಿನಿ ಕೊಳಚಿ ಕಾಲುವೆ ಉಪ ವಿಭಾಗ, ಕೊಣ್ಣೂರು, ನರಗುಂದ ತಾ:, ಗದಗ್ ಜಿಲ್ಲೆ.

**ಭಾಗ-2**

**ಈ ಕಛೇರಿಯಲ್ಲಿ ಪ್ರಸಕ್ತ ಸಾಲಿನಲ್ಲಿ ಕೈಗೊಳ್ಳಲಾದ ಅಭಿವೃದ್ಧಿ ಕಾರ್ಯಕ್ರಮಗಳ ವಿವರಗಳು**

1. ಕೊಳಚಿ ಕಾಲುವೆ ಕಿಮೀ. 0 ರಿಂದ 49ರ ವರೆಗೆ ಬಿಡುವಿನ ಕಾಮಗಾರಿಗಳ ಕೆಲಸ ನಿರ್ವಹಣೆ.
2. ಕೊಳಚಿ ಕಾಲುವೆ ಕಿಮೀ. 0 ರಿಂದ 49ರ ವರೆಗೆ ವಾರ್ಷಿಕ ನೀರು ನಿರ್ವಹಣೆ ಉಸ್ತುವಾರಿ.
3. ಬೆಣ್ಣೆಹಳ್ಳ ಅಸೂಟಿ ಏತ ನೀರಾವರಿ ಯೋಜನೆ ಕಾಮಗಾರಿ.

ಸಹಾಯಕ ಕಾರ್ಯನಿರ್ವಾಹಕ ಇಂಜಿನೀಯರು,
ಪಿ.ಡಿ. 92 ಕನೀನಿನಿ ಕೊಳಚಿ ಕಾಲುವೆ ಉಪ ವಿಭಾಗ, ಕೊಣ್ಣೂರು, ನರಗುಂದ ತಾ:, ಗದಗ್ ಜಿಲ್ಲೆ.

**ಕಾರ್ಮಿಕ ಇಲಾಖೆ**

**ಅಧಿಸೂಚನೆ**

**ಸಂಖ್ಯೆ: ಕಾಇ 50 ಕಾಬಾಸೇ 2005 , ಬೆಂಗಳೂರು, ದಿನಾಂಕ: 7ನೇ ನವೆಂಬರ್ 2005**

**ವಿಷಯ:** ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯ ಅಧಿಕಾರಿಗಳ ಕರಡು ಜೇಷ್ಠತೆಯ ಬಗ್ಗೆ- ದಿನಾಂಕ:01.01.2005 ರಲ್ಲಿದ್ದಂತೆ.

**ಉಲ್ಲೇಖ:** 1) ಅಧಿಕೃತ ಜ್ಞಾಪನ ಸಂಖ್ಯೆ:ಕಾಇ 94 ಕಾಬಾಸೇ 2001, ದಿನಾಂಕ:29.3.2005.

2) ಕಾರ್ಖಾನೆ ಮತ್ತು ಬಾಯ್ಲರುಗಳ ನಿರ್ದೇಶನಾಲಯದ ನಿರ್ದೇಶಕರ ಪತ್ರ ಸಂಖ್ಯೆ:ಇಎಸ್‌ಟಿ-2/ಡಿಬಿಎಸ್/ಸಿಆರ್-21/2005-.06, ದಿನಾಂಕ:24.8.2005.

ಕಾರ್ಖಾನೆ ಮತ್ತು ಬಾಯ್ಲರುಗಳ ಇಲಾಖೆಯ ಈ ಕೆಳಗಿನ ವೃಂದಗಳ ಕರಡು ಜೇಷ್ಠತಾ ಪಟ್ಟಿಯಲ್ಲಿ ಕರ್ನಾಟಕ ನಾಗರೀಕ ಸೇವೆಗಳು (ಜೇಷ್ಠತಾ) ನಿಯಮಾವಳಿ 1957 ರಂತೆ ತಯಾರಿಸಿ ಇದಕ್ಕೆ ಲಗತ್ತಿಸಿರುವ ಅನುಬಂಧಗಳಲ್ಲಿನಂತೆ ಜೇಷ್ಠತೆಯನ್ನು ನಿಗದಿಗೊಳಿಸಿ ದಿನಾಂಕ: 01.01.2005 ರಲ್ಲಿದ್ದಂತೆ ಪ್ರಕಟಿಸಲಾಗಿದೆ:

**ಅನುಬಂಧ**

1. ಪತ್ರಾಂಕಿತ ವ್ಯವಸ್ಥಾಪಕರು -1
2. ಕಾರ್ಖಾನೆಗಳ ಸಹಾಯಕ ನಿರ್ದೇಶಕರು -2
3. ಬಾಯ್ಲರುಗಳ ಸಹಾಯಕ ನಿರ್ದೇಶಕರು -3
4. ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರು -4
5. ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರು -5
6. ಕಾರ್ಖಾನೆಗಳ ಉಪ ನಿರ್ದೇಶಕರು -6
7. ಬಾಯ್ಲರುಗಳ ಉಪ ನಿರ್ದೇಶಕರು -7
8. ಕಾರ್ಖಾನೆಗಳ ಜಂಟಿ ನಿರ್ದೇಶಕರು -8
9. ಬಾಯ್ಲರುಗಳ ಜಂಟಿ ನಿರ್ದೇಶಕರು -9
10. ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) -10
11. ಆಡಳಿತಾಧಿಕಾರಿ -11

ಈ ಸಂಬಂಧ ಸಂಬಂಧಿತ ಅಧಿಕಾರಿಗಳಿಂದ ಏನಾದರೂ ಆಕ್ಷೇಪಣೆಗಳಿದ್ದಲ್ಲಿ, ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ 30 ದಿನಗಳೊಳಗಾಗಿ ಪ್ರಧಾನ ಕಾರ್ಯದರ್ಶಿಗಳು, ಕಾರ್ಮಿಕ ಇಲಾಖೆ, ಬಹುಮಹಡಿಗಳ ಕಟ್ಟಡ, (2ನೇ ಹಂತ, 1ನೇ ಮಹಡಿ) ಬೆಂಗಳೂರು-1 ಇವರಿಗೆ ಕಳುಹಿಸಿಕೊಡುವಂತೆ ಕೋರಲಾಗಿದೆ.

ಕರ್ನಾಟಕ ರಾಜ್ಯಪಾಲರ ಆಜ್ಞಾನುಸಾರ ಮತ್ತು ಅವರ ಹೆಸರಿನಲ್ಲಿ,

**ಹೆಚ್.ಜಿ. ಮಲ್ಲಿಕಾರ್ಜುನ ಸ್ವಾಮಿ**

ಸರ್ಕಾರದ ಅಧೀನ ಕಾರ್ಯದರ್ಶಿ,

ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

**ಅನುಬಂಧ-1**

**ಪತ್ರಾಂಕಿತ ವ್ಯವಸ್ಥಾಪಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಪತ್ರಾಂಕಿತ ವ್ಯವಸ್ಥಾಪಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| | **ಶ್ರೀಯುತರು** | | | | |
| 1 | ಪಿ. ಓಬಳೇಸುಲು (ಎಸ್.ಟಿ) | 01-07-1954 | 28-04-1986 | 03-12-2004 | |
| 2 | ಕೃಷ್ಣ (ಎಸ್.ಸಿ) | 17-08-1950 | 27-12-1972 | 29-11-2004 | |

**ಅನುಬಂಧ-2**

**ಕಾರ್ಖಾನೆಗಳ ಸಹಾಯಕ ನಿರ್ದೇಶಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| | **ಶ್ರೀಯುತರು** | | | | |
| 1 | ಆರ್.ಕೆ.ಪಾರ್ಥಸಾರಧಿ | 23-12-1967 | 29-10-1997 | 29-10-1997 | |
| 2 | ಎನ್.ನವನೀತ್ ಮೋಹನ್ | 11-03-1971 | 12-11-1997 | 12-11-1997 | |
| 3 | ಎಂ.ಎಸ್.ಮಹದೇವ್ | 20-07-1967 | 12-11-1997 | 12-11-1997 | |

| 1 | 2 | 3 | 4 | 5 | 6 |
|---|---|---|---|---|---|
| 4 | ವಿ.ತಿಮ್ಮರಾಜು | 18-05-1970 | 20-10-1997 | 20-10-1997 | |
| 5 | ಎಸ್.ಎ.ನರಸಿಂಹಮೂರ್ತಿ | 20-07-1967 | 13-11-1997 | 13-11-1997 | |
| 6 | ಸಿ.ರಾಜೇಶ್‌ಮಿಶ್ರಕೋಟಿ(ಎಸ್.ಸಿ) | 17-11-1969 | 20-10-1997 | 20-10-1997 | |
| 7 | ಕೆ.ಎಸ್.ಕೃಷ್ಣಪ್ಪ (ಎಸ್.ಟಿ) | 01-06-1971 | 12-11-1997 | 12-11-1997 | |
| 8 | ಎಂ.ಎ.ಸೋಮಶೇಖರ್ | 15-07-1973 | 11-03-1998 | 11-03-1998 | |
| 9 | ವೆಂಕಟೇಶ್ ರಾಥೋಡ್(ಎಸ್.ಸಿ) | 24-03-1974 | 16-03-1998 | 16-03-1998 | |
| 10 | ಭಾರತಿ ಮಗದುಮ್ ಅಣ್ಣಪ್ಪ | 27-08-1966 | 23-03-1998 | 23-03-1998 | |
| 11 | ಕೆ.ಎಸ್.ಸಫೀರ್ ಅಹ್ಮದ್ | 09-08-1963 | 05-03-1998 | 05-03-1998 | |
| 12 | ಹೆಚ್.ಸುರೇಶ್ | 20-06-1970 | 29-04-1999 | 29-04-1999 | |

**ಅನುಬಂಧ-3**

**ಬಾಯ್ಲರುಗಳ ಸಹಾಯಕ ನಿರ್ದೇಶಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಬಾಯ್ಲರುಗಳ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| 1 | ಶ್ರೀಯುತರಾದ<br>ಎಂ.ಹೆಚ್.ಚಿಕ್ಕಮುನಿಯಪ್ಪ(ಎಸ್.ಸಿ) | 18-04-1964 | 16-10-2003 | 16-10-2003 | |

**ಅನುಬಂಧ-4**

**ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| | ಶ್ರೀಯುತರು | | | | |
| 1 | ಎಸ್.ಆರ್.ಶ್ರೀಧರ್ | 06-09-1957 | 17-06-1983 | 30-10-1999 | |
| 2 | ಕೆ.ಶ್ರೀನಿವಾಸ್(ಎಸ್.ಸಿ) | 14-02-1966 | 28-09-1988 | 24-04-2000 | |
| 3 | ಟಿ.ಆರ್.ರಮೇಶ್(ಎಸ್.ಟಿ) | 30-07-1960 | 26-09-1988 | 20-04-2000 | |
| 4 | ಕೆ.ಜಿ.ನಂಜಪ್ಪ | 25-04-1972 | 03-08-1995 | 19-10-2002 | |
| 5 | ಟಿ.ವಿ.ನಾರಾಯಣಪ್ಪ | 10-03-1967 | 09-08-1995 | 19-10-2002 | |
| 6 | ಎ.ಜೆ.ಸತೀಶ್ ಬಾಬು | 12-01-1963 | 03-08-1995 | 19-10-2002 | |
| 7 | ರವೀಂದ್ರನಾಥ<br>ಎನ್.ರಾಥೋಡ್(ಎಸ್.ಸಿ) | 22-05-1969 | 29-12-1995 | 19-10-2002 | |
| 8 | ಹೆಚ್.ಎಸ್.ನರೇಂದ್ರಬಾಬು | 23-08-1966 | 01-04-1991 | 08-11-2002 | |

**ಅನುಬಂಧ-5**

**ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ**

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಬಾಯ್ಲರುಗಳ ಹಿರಿಯ ಸಹಾಯಕ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| | ಶ್ರೀಯುತರು | | | | |
| 1 | ಕೆ.ವಿ.ಚಂದ್ರಮೌಳಿ | 20-05-1956 | 07-03-1984 | 02-06-1996 | |
| 2 | ಅಶೋಕ್.ಆರ್.ಗಾಂವಕರ್ | 14-02-1956 | 10-08-1989 | 26-08-1999 | |
| 3 | ಕೆ.ವಿ.ಪಾಲಯ್ಯ(ಎಸ್.ಟಿ) | 19-09-1962 | 21-04-1995 | 04-02-2003 | |
| 4 | ಕೆ.ಎಂ.ಪ್ರಥಮ್ | 20-05-1969 | 19-12-1991 | 27-12-2004 | |

ಅನುಬಂಧ-6

ಕಾರ್ಖಾನೆಗಳ ಉಪ ನಿರ್ದೇಶಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಉಪ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| | ಶ್ರೀಯುತರು | | | | |
| 1 | ಎ.ಆರ್.ವಿಜಯೇಂದ್ರ | 26-10-1958 | 01-04-1982 | 19-07-1999 | |
| 2 | ಎಂ.ಎನ್.ಜಕ್ಕಣ್ಣವರ್ | 05-08-1956 | 12-04-1982 | 14-10-1999 | |
| 3 | ಎ.ಸೋಮಶೇಖರ್ | 22-05-1955 | 02-01-1984 | 20-04-2001 | |
| 4 | ಜೆ.ಪಿ.ರಾಜಗೋಪಾಲ್ | 31-01-1959 | 05-01-1984 | 16-07-2001 | |
| 5 | ಬಿ.ವಿ.ರವಿಕುಮಾರ್ | 04-04-1959 | 20-06-1986 | 10-10-2002 | |
| 6 | ಡಿ.ಸಿ.ಜಗದೀಶ್ | 10-10-1959 | 25-06-1983 | 21-10-2002 | |

ಅನುಬಂಧ-7

ಬಾಯ್ಲರುಗಳ ಉಪ ನಿರ್ದೇಶಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಬಾಯ್ಲರುಗಳ ಉಪ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| | ಶ್ರೀಯುತರು | | | | |
| 1 | ಎಸ್.ಪಿ.ಬಿರಾದಾರ್ | 08-11-1954 | 08-03-1984 | 04-02-2003 | |
| 2 | ಎಸ್.ಎಂ.ವಾಸಣ್ಣ | 05-03-1958 | 08-03-1984 | 10-11-2004 | |

ಅನುಬಂಧ-8

ಕಾರ್ಖಾನೆಗಳ ಜಂಟಿ ನಿರ್ದೇಶಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಜಂಟಿ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| 1 | ಶ್ರೀಯುತರು<br>ಎಚ್.ಶ್ರೀನಿವಾಸಯ್ಯ | 05-06-1952 | 05-08-1978 | 26-03-2001 | |
| 2 | ಬಿ.ಎಸ್.ರಾಮಚಂದ್ರ | 15-03-1955 | 24-07-1978 | 26-04-2002 | |

ಅನುಬಂಧ-9

ಬಾಯ್ಲರುಗಳ ಜಂಟಿ ನಿರ್ದೇಶಕರ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಬಾಯ್ಲರುಗಳ ಜಂಟಿ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| 1 | ಶ್ರೀಯುತರು<br>ಟಿ.ಜಿ.ಮಂಜುನಾಥ (ಎಸ್.ಸಿ) | 24-09-1958 | 18-02-1982 | 09-07-2004 | |

ಅನುಬಂಧ-10

ಕಾರ್ಖಾನೆಗಳ ಉಪ ನಿರ್ದೇಶಕರು (ವೈದ್ಯಕೀಯ) ವೃಂದದ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಜಂಟಿ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | 2 | 3 | 4 | 5 | 6 |
| 1 | ಶ್ರೀಯುತರು<br>ಡಾ:ವಿ.ಎಚ್.ಎಚ್.ಸುರೇಂದ್ರ | 09-03-1958 | 31-04-1984 | 30-03-1997 | |

ಅನುಬಂಧ-11

ಕಾರ್ಖಾನೆಗಳ ಆಡಳಿತಾಧಿಕಾರಿ ವೃಂದದ ಕರಡು ಜೇಷ್ಠತಾ ಪಟ್ಟಿ ದಿನಾಂಕ:01.01.2005ರಲ್ಲಿದ್ದಂತೆ

| ಕ್ರಮ ಸಂಖ್ಯೆ | ಅಧಿಕಾರಿಯ ಹೆಸರು | ಜನ್ಮ ದಿನಾಂಕ | ಸೇವೆಗೆ ಸೇರಿದ ದಿನಾಂಕ | ಕಾರ್ಖಾನೆಗಳ ಜಂಟಿ ನಿರ್ದೇಶಕರ ವೃಂದಕ್ಕೆ ಸೇರಿದ ದಿನಾಂಕ | ಷರಾ |
|---|---|---|---|---|---|
| 1 | ಶ್ರೀಯುತರು ವೀರಪ್ಪ | 28-03-1955 | 22-09-1977 | 23-08-2004 | |

**ಹೆಚ್.ಜಿ. ಮಲ್ಲಿಕಾರ್ಜುನ ಸ್ವಾಮಿ**
ಸರ್ಕಾರದ ಅಧೀನ ಕಾರ್ಯದರ್ಶಿ,
ಕಾರ್ಮಿಕ ಇಲಾಖೆ, (ಕಾರ್ಖಾನೆ ಮತ್ತು ಬಾಯ್ಲರುಗಳು)

ಪಿ.ಆರ್. 1816

**ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ**

**ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ, ನೆಹರು ನಗರ, ಬೆಳಗಾವಿ-10.**

**ಪ್ರಕಟಣೆ ಸಂಖ್ಯೆ: ಬಿಜಿಎಂ/ಬೃಕಾವಿ/ಕಾನಿಇಂ/ಸಕಾನಿಇಂ(ಕ)/2144-46, ದಿನಾಂಕ: 24ನೇ ಸೆಪ್ಟೆಂಬರ್ 2005**

1948 ಅಧಿನಿಯಮ ಭಾರತ ವಿದ್ಯುಚ್ಛಕ್ತಿ 29(1) ಅಡಿಯಲ್ಲಿ ಮಂಜೂರಾತಿಯಾದ ಯೋಜನೆಗಳನ್ನು ಈ ಮೂಲಕ ಪ್ರಕಟಿಸಲಾಗಿದೆ.

1948ರ ವಿದ್ಯುತ್ ಸರಬರಾಜು ಕಾಯಿದೆ ಅನುಬಂಧ 28ರ ಅಡಿಯಲ್ಲಿ ಕರ್ನಾಟಕ ವಿದ್ಯುಚ್ಛಕ್ತಿ ಪ್ರಸರಣ ನಿಗಮ ನಿಯಮಿತ ಯೋಜನೆಗಳನ್ನು ರೂಪಿಸಿದ್ದು ಕಾಯಿದೆ ಅನುಬಂಧ 29(1) ಅಡಿಯಲ್ಲಿ ಪರವಾನಿಗೆ ಹೊಂದಿದ ಹಾಗೂ ಆಸಕ್ತ ವ್ಯಕ್ತಿಗಳ ಮಾಹಿತಿಗಾಗಿ ಯೋಜನೆಯ ವಿವರಗಳು ಈ ಕೆಳಗಿನಂತಿವೆ.

1. **ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನಲ್ಲಿ ಹೊಸದಾಗಿ ನಿರ್ಮಿಸುತ್ತಿರುವ 220 ಕೆ.ವ್ಹಿ. ವಿದ್ಯುತ್ ಕೇಂದ್ರಕ್ಕೆ ಈಗಿರುವ ಹುಬ್ಬಳ್ಳಿ-ಮಹಾಲಿಂಗಪೂರ 220 ಕೆ.ವ್ಹಿ. ಒಂಟಿ ಮಾರ್ಗದಿಂದ ಲಿಲೋ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ** ಬೆಟಸುರ ಎಡ್ರಾವಿ ಮತ್ತು ಸವದತ್ತಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

2. **ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನಲ್ಲಿ 110 ಕೆ.ವ್ಹಿ. ಜೋಡಿ ಗೋಪುರದ ಮೇಲೆ ಪ್ರಸರಣ ಮಾರ್ಗವನ್ನು ನಿರ್ಮಾಣಮಾಡಲು ಯೋಚಿಸಲಾದ 220 ಕೆ.ವ್ಹಿ. ಸವದತ್ತಿ ವಿದ್ಯುತ್ ಕೇಂದ್ರದಿಂದ ಸವದತ್ತಿ - ನರಗುಂದ 110 ಕೆ.ವ್ಹಿ. ಪ್ರಸರಣ ಮಾರ್ಗಕ್ಕೆ ಜೋಡಿಸುವುದು.

**ಪ್ರಮುಖ ಲಕ್ಷಣಗಳು** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಎಡ್ರಾವಿ ಮತ್ತು ಸವದತ್ತಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

3. **ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನಲ್ಲಿ ಈಗಾಗಲೆ ನಿರ್ಮಾಣಮಾಡಲು ಯೋಚಿಸಲಾದ 220 ಕೆ.ವ್ಹಿ. ಸವದತ್ತಿ ವಿದ್ಯುತ್ ಕೇಂದ್ರದಿಂದ ಈಗಿರುವ ಸವದತ್ತಿ-ಯರಗಟ್ಟಿ 110 ಕೆ.ವ್ಹಿ. ಪ್ರಸರಣ ಮಾರ್ಗಕ್ಕೆ 110 ಕೆ.ವ್ಹಿ. ಜೋಡಿಗೋಪುರದ ಮೇಲೆ ಪ್ರಸರಣ ಮಾರ್ಗವನ್ನು ಜೋಡಿಸುವುದು.

**ಪ್ರಮುಖ ಲಕ್ಷಣಗಳು** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಸವದತ್ತಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

4. **ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ಸವದತ್ತಿ ತಾಲ್ಲೂಕಿನಲ್ಲಿ ಮುನವಳ್ಳಿಯಲ್ಲಿ ನಿರ್ಮಿಸಲು ಯೋಚಿಸಲಾದ 110 ಕೆ.ವಿ. ವಿದ್ಯುತ್ ಕೇಂದ್ರಕ್ಕೆ ಈಗಿರುವ 110 ಕೆ.ವಿ. ಸವದತ್ತಿ-ಯರಗಟ್ಟಿ ಮಾರ್ಗದಿಂದ ಟ್ಯಾಪ್ ಮಾಡಿ ಮುನವಳ್ಳಿ ವಿದ್ಯುತ್ ಕೇಂದ್ರಕ್ಕೆ ಜೋಡಿಗೋಪುರದ ಮೇಲೆ ಒಂಟಿ ಪ್ರಸರಣ ಮಾರ್ಗವನ್ನು ಜೋಡಿಸುವುದು.

**ಪ್ರಮುಖ ಲಕ್ಷಣಗಳು** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಮುನವಳ್ಳಿ ಮತ್ತು ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

5. **ಯೋಜನೆಯ ಹೆಸರು:** ಬೆಳಗಾವಿ ಜಿಲ್ಲೆಯ ರಾಮದುರ್ಗ ತಾಲ್ಲೂಕಿನಲ್ಲಿ ಸಾಲಹಳ್ಳಿಯಲ್ಲಿ ನಿರ್ಮಿಸಲು ಯೋಚಿಸಲಾದ 110 ಕೆ.ವಿ. ವಿದ್ಯುತ್ ಕೇಂದ್ರಕ್ಕೆ ಲೋಕಾಪುರ ವಿದ್ಯುತ್ ಕೇಂದ್ರದಿಂದ ಸಾಲಹಳ್ಳಿಯವರೆಗೆ ಜೋಡಿಗೋಪುರದ ಮೇಲೆ ಒಂಟಿ ಪ್ರಸರಣ ಮಾರ್ಗವನ್ನು ನಿರ್ಮಿಸುವುದು.

**ಪ್ರಮುಖ ಲಕ್ಷಣಗಳು** ಸದರಿ ಪ್ರದೇಶದಲ್ಲಿ ಕಡಿಮೆ ವೋಲ್ಟೇಜನ್ನು ಸುಧಾರಿಸುವುದು ಸುತ್ತಲಿನ ಹಳ್ಳಿಗಾಡಿನ ಪ್ರದೇಶದಲ್ಲಿ ಉತ್ತಮ ಗುಣಮಟ್ಟದ ವಿದ್ಯುತ್ ಪೂರೈಸುವುದು ಮತ್ತು ಭವಿಷ್ಯದ ಲೋಡ್ ಬೆಳವಣಿಗೆಯನ್ನು ಭರಿಸುವುದು.

**ಹಾದುಹೋಗುವ ಪ್ರದೇಶ:** ಲೋಕಾಪುರ, ವರ್ಚಗಲ್ಲ, ವೆಂಕಟಾಪುರ, ಪಂಚಗಾಂವ ಮತ್ತು ಸಾಲಹಳ್ಳಿ ಹಾಗೂ ಅಕ್ಕ-ಪಕ್ಕ ಹದ್ದಿನಲ್ಲಿ ಬರುವ ಹಳ್ಳಿಗಳು.

ಮೇಲಿನ ಯೋಜನೆಗಳನ್ನು ನಿರ್ವಹಿಸಲು 1885ರ ಭಾರತಿಯ ಟೆಲಿಗ್ರಾಫ್ ಕಾಯಿದೆ (1885ರ 13) ಭಾಗ-III ಅನ್ವಯ ಟೆಲಿಗ್ರಾಫ್ ಪ್ರಾಧಿಕಾರವು ಪಡೆದುಕೊಂಡಿರುವ ಎಲ್ಲಾ ಅಧಿಕಾರವನ್ನು ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತ ಹೊಂದಿರುವುದು ಮತ್ತು ಚಲಾಯಿಸುವ ಹಕ್ಕನ್ನು ಪಡೆದಿರುವುದು. ಯೋಜನೆಗಳ ಬಗ್ಗೆ ಆಕ್ಷೇಪಣೆಗಳು ಏನಾದರು ಇದ್ದಲ್ಲಿ ಅವುಗಳನ್ನು ಪರಿಗಣಿಸಲು ಕಾರ್ಯ ನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ ನೆಹರು ನಗರ ಬೆಳಗಾವಿ-10 ಇವರಿಗೆ ಪ್ರಕಟಣೆ ಪ್ರಕಟವಾದ ದಿನಾಂಕದಿಂದ 2 ತಿಂಗಳ ಒಳಗೆ ತಲುಪುವಂತೆ ಕಳುಹಿಸಿಕೊಡಬೇಕು.

ಕಾರ್ಯನಿರ್ವಾಹಕ ಅಭಿಯಂತರರು (ವಿ) ಬೃಹತ್ ಕಾಮಗಾರಿ ವಿಭಾಗ,
ನೆಹರು ನಗರ, ಬೆಳಗಾವಿ-10.

ಪಿ.ಡಿ. 94

## ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬೆಳಗಾವಿ

**ಪ್ರಕಟಣೆ ಸಂಖ್ಯೆ: ಜಿಪವಕ/ಲೆಕ್ಕ/ಕಾಪತ/ಸಿಆರ್-36/2005-06/599, ದಿನಾಂಕ: 29ನೇ ನವೆಂಬರ್ 2005**

**ವಿಷಯ :** ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧಿಕರಣದಲ್ಲಿ ತರಬೇತಿಗೆ 2005-06ನೇ ಸಾಲಿಗೆ ಅಭ್ಯರ್ಥಿಗಳನ್ನು ಆಯ್ಕೆ ಮಾಡುವ ಕುರಿತು.

**ಉಲ್ಲೇಖ :** 1) ಸರ್ಕಾರದ ಆದೇಶ ಸಂಖ್ಯೆ: ಎಸ್‌ಡಬ್ಲ್ಯೂಎಲ್-68/ಎಸ್ ಡಬ್ಲ್ಯೂ-89, ದಿನಾಂಕ: 02.11.1990.
2) ಸರ್ಕಾರದ ಆದೇಶ ಸಂಖ್ಯೆ/ಸಕಇ-42/ಪಕವಿ/95, ದಿನಾಂಕ: 29.07.1997.

2005-06ನೇ ಸಾಲಿಗೆ ಬೆಳಗಾವಿ ಜಿಲ್ಲೆಯ ಪರಿಶಿಷ್ಟ ವರ್ಗದ ಕಾನೂನು ಪದವೀಧರರಿಗೆ ಆಡಳಿತ ನ್ಯಾಯಾಧಿಕರಣದಲ್ಲಿ ತರಬೇತಿ ನೀಡುವ ಕುರಿತು ಅರ್ಹ ಅಭ್ಯರ್ಥಿಗಳಿಂದ ಈ ಕೆಳಕಂಡ ನಿಬಂಧನೆಗೆ ಒಳಗೊಂಡಂತೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ.

1. ಬೆಳಗಾವಿ ಜಿಲ್ಲೆಗೆ ಸಂಬಂಧಿಸಿದ ಹಾಗೂ ವಕೀಲ ವೃತ್ತಿ ನಡೆಸಲು ಅರ್ಹತೆಯುಳ್ಳ ಕಾನೂನು ಪದವೀಧರರು ಮಾತ್ರ ಈ ತರಬೇತಿಗೆ ಅರ್ಹರು.
2. ತರಬೇತಿಗೆ ಅರ್ಹ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುವುದು, ಮಹಿಳಾ ಅಭ್ಯರ್ಥಿಗಳಿಗೆ ಆದ್ಯತೆ ನೀಡಲಾಗುವುದು.
3. ಅಭ್ಯರ್ಥಿಯು ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕದಂದು 35 ವರ್ಷಗಳನ್ನು ಮೀರಿರಬಾರದು ಈ ಕುರಿತು ಅಧಿಕೃತ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.
4. ಅರ್ಜಿಯನ್ನು ಸಲ್ಲಿಸಲು ನಿಗದಿಪಡಿಸಿರುವ ಕೊನೆಯ ದಿನಾಂಕಕ್ಕೆ (2) ಎರಡು ವರ್ಷದೊಳಗೆ ತೇರ್ಗಡೆಯಾದ ಕಾನೂನು ಪದವೀಧರರು ಈ ತರಬೇತಿಗೆ ಅರ್ಹರು.
5. ಆಯ್ಕೆಯಾದ ಅಭ್ಯರ್ಥಿಗಳಿಗೆ ನಾಲ್ಕು ವರ್ಷಗಳ ತರಬೇತಿ ನೀಡಲಾಗುವುದು. ಹಾಗೂ ಮಾಹೆಯಾನ ರೂ. 1000.00 ತರಬೇತಿ ಭತ್ಯೆ ನೀಡಲಾಗುವುದು. ತರಬೇತಿಯನ್ನು ಮಧ್ಯದಲ್ಲಿ ಬಿಟ್ಟು ಹೋಗಬಾರದು ಕೇಂದ್ರ ಹಾಗೂ ರಾಜ್ಯ ಸರ್ಕಾರದಲ್ಲಿ ಉದ್ಯೋಗ ದೊರೆತಲ್ಲಿ ಈ ನಿಬಂಧನೆ ಅನ್ವಯವಾಗುವುದಿಲ್ಲ.
6. ಅಪೂರ್ಣ ಹಾಗೂ ಅವಧಿ ಮೀರಿ ಬಂದ ಅರ್ಜಿಗಳನ್ನು ತಿರಸ್ಕರಿಸಲಾಗುವುದು.
7. ಆಯ್ಕೆಯಾದ ಅಭ್ಯರ್ಥಿಗಳನ್ನು ಜಿಲ್ಲಾ ಪಬ್ಲಿಕ್ ಪ್ರಾಸಿಕ್ಯೂಟರ್ ಸರ್ಕಾರಿ ವಕೀಲರು ಅಥವಾ 20 ವರ್ಷಗಳಿಗಿಂತ ಕಡಿಮೆ ಇಲ್ಲದ ವಕೀಲ ವೃತ್ತಿಯಲ್ಲಿ ಅನುಭವವಿರುವ ಖಾಸಗಿ ಹಿರಿಯ ವಕೀಲರಲ್ಲಿ ತರಬೇತಿ ಪಡೆಯಲು ನಿಯೋಜಿಸಲಾಗುವುದು.
8. ಆಯ್ಕೆಯಾದ ಅಭ್ಯರ್ಥಿಯು ಸರ್ಕಾರದ ಎಲ್ಲ ನಿಬಂಧನೆಗೆ ಬದ್ಧನಾಗಿರುತ್ತೇನೆ ಎಂದು ಮುಚ್ಚಳಿಕೆಯನ್ನು ಬರೆದುಕೊಡತಕ್ಕದ್ದು.
9. ಆಯ್ಕೆಯಾದ ಅಭ್ಯರ್ಥಿಯು ಸುಳ್ಳು ಮಾಹಿತಿ ಹಾಗೂ ಪ್ರಮಾಣ ಪತ್ರಗಳನ್ನು ಒದಗಿಸಿದಲ್ಲಿ ಶಿಕ್ಷೆಗೊಳಪಡುವುದಲ್ಲದೆ ಅವನು ಪಡೆದುಕೊಂಡ ತರಬೇತಿ ಭತ್ಯೆಯ ಪೂರ್ತಿ ಹಣವನ್ನು ವಾರ್ಷಿಕ ಶೇ.10 ರಂತೆ ಬಡ್ಡಿಯೊಂದಿಗೆ ವಸೂಲಿ ಮಾಡಲಾಗುವುದು. ಒಂದು ವೇಳೆ ಬಾಕಿ ವಸೂಲಿ ಉಳಿದಲ್ಲಿ ಭೂ ಕಂದಾಯ ಬಾಕಿ ನಿಯಮಾವಳಿ ಅನ್ವಯ ವಸೂಲಿ ಮಾಡಲಾಗುವುದು.
10. ಅಭ್ಯರ್ಥಿಗಳು ನಿಗದಿತ ಅರ್ಜಿ ನಮೂನೆಗಳನ್ನು ಹಾಗೂ ಹೆಚ್ಚಿನ ಮಾಹಿತಿಯನ್ನು ಕಛೇರಿ ನಡೆಯುವ ವೇಳೆಯಲ್ಲಿ ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿಗಳ ಕಾರ್ಯಾಲಯ, ಬೆಳಗಾವಿ ನೆಹರು ನಗರ ಇವರ ಕಛೇರಿಯಲ್ಲಿ ಪಡೆದುಕೊಳ್ಳಲು ಸೂಚಿಸಿದೆ.
11. ಅರ್ಹ ಅಭ್ಯರ್ಥಿಗಳಿಗೆ ಸಂದರ್ಶನ ದಿನಾಂಕವನ್ನು ಮತ್ತು ಸ್ಥಳವನ್ನು ತಿಳಿಸಲಾಗುವುದು.
12. ಅಭ್ಯರ್ಥಿಗಳು ಭರ್ತಿ ಮಾಡಿದ ನಿಗದಿತ ಅರ್ಜಿಯೊಂದಿಗೆ ಅವಶ್ಯಕ ಮಾಹಿತಿಗಳಾದ ಪದವಿ ಪರೀಕ್ಷೆ ಹಾಗೂ ಪ್ರಥಮ, ದ್ವಿತೀಯ ಮತ್ತು ತೃತೀಯ ವರ್ಷದ ಕಾನೂನು ಪರೀಕ್ಷೆಗಳ ದೃಢೀಕೃತ ಅಂಕಪಟ್ಟಿ ಮತ್ತು ತೇರ್ಗಡೆ ಹೊಂದಿದ ಪ್ರಮಾಣ ಪತ್ರ, ಜನ್ಮ ದಿನಾಂಕ: ಪ್ರಮಾಣ ಪತ್ರ ಅಥವಾ ಟಿ.ಸಿ. ಮತ್ತು ಬಾರ್ ಅಸೋಶಿಯೇಶನ್‌ದಲ್ಲಿ ಸದಸ್ಯತ್ವ ಪಡೆದ ಬಗ್ಗೆ ಪ್ರಮಾಣ ಪತ್ರ ಲಗತ್ತಿಸಬೇಕು.
13. ಅರ್ಜಿಗಳನ್ನು ಸ್ವೀಕರಿಸುವ ಕೊನೆಯ ದಿನಾಂಕ: **15.12.2005.**

ಪಿ.ಆರ್.1949 ಜಿಲ್ಲಾ ಪರಿಶಿಷ್ಟ ವರ್ಗಗಳ ಕಲ್ಯಾಣ ಅಧಿಕಾರಿ, ಬೆಳಗಾವಿ.

## ಕರ್ನಾಟಕ ವಿದ್ಯುತ್ ಪ್ರಸರಣಾ ನಿಗಮ ನಿಯಮಿತ

**ಕಾರ್ಯನಿರ್ವಾಹಕ ಇಂಜಿನಿಯರ್ (ವಿ) ಕಛೇರಿ, ಬೃಕಾವಿ / ಕವಿಪ್ರನಿನಿ / ಹಾಸನ.**

**ಪ್ರಕಟಣೆ ಸಂಖ್ಯೆ: ಎಇಇ(ಕ)/ಟಿ-143/5141, ದಿನಾಂಕ: 5ನೇ ಫೆಬ್ರವರಿ 2005**

ವಿದ್ಯುತ್ ಪೂರೈಕೆ ಅಧಿನಿಯಮ 1948, ಸೆಕ್ಷನ್ 28, ಮತ್ತು 18(ಇ) ಅನುಸಾರವಾಗಿ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತವು ಒಂದು ಯೋಜನೆಯನ್ನು ರೂಪಿಸಿದೆ. ಈ ಯೋಜನೆಯನ್ನು ಅದೇ ಅಧಿನಿಯಮದ ಸೆಕ್ಷನ್ 29(2)ಕ್ಕೆ ಅನುಸಾರವಾಗಿ ಇಲ್ಲಿ ಪ್ರಕಟಿಸಲಾಗಿದೆ. ಈ ಪ್ರಕಟಣೆಯನ್ನು ಲೈಸೆನ್ಸ್ ಹೊಂದಿರುವವರು ಮತ್ತು ಇನ್ನಿತರ ಯಾವುದೇ ಸಂಬಂಧಿಸಿದ ವ್ಯಕ್ತಿಗಳ ಮಾಹಿತಿಗಾಗಿ ನೀಡಲಾಗಿದೆ. ಯೋಜನೆಯ ವಿವರಗಳು ಈ ಕೆಳಕಂಡಂತಿವೆ:-

| | |
|---|---|
| **ಕೆಲಸದ ಹೆಸರು:** | ಜೋಡಿಗುಬ್ಬಿಯ ಹತ್ತಿರ 66 ಕೆ.ವಿ. ಹೊಳೆನರಸೀಪುರ-ರಾಮನಾಥಪುರ ವಿದ್ಯುತ್ ಮಾರ್ಗದಿಂದ ಸಂಪರ್ಕ ಜೋಡಣೆ ಮಾಡಿ ಉದ್ದೇಶಿತ ಹಾಸನ ಜಿಲ್ಲೆ, ಅರಕಲಗೂಡು ತಾಲ್ಲೂಕು, ಬೈಚನಹಳ್ಳಿ 66/11 ಕೆ.ವಿ. ವಿದ್ಯುತ್ ವಿತರಣಾ ಕೇಂದ್ರಕ್ಕೆ ಹೊಸ ವಿದ್ಯುತ್ ಮಾರ್ಗ ನಿರ್ಮಾಣ. |
| **ಉದ್ದೇಶ:** | ಹಾಸನ ಜಿಲ್ಲೆಯ, ಅರಕಲಗೂಡು ತಾಲ್ಲೂಕು, ಬೈಚನಹಳ್ಳಿ ಹಾಗೂ ಸುತ್ತಮುತ್ತಲ ಪ್ರದೇಶದ ವೋಲ್ಟೇಜ್ ಸ್ಥಿತಿ ಉತ್ತಮ ಪಡಿಸಿ ಸ್ಥಿರವಾದ ವಿದ್ಯುತ್ ಪೂರೈಸಲು ಮತ್ತು ಭವಿಷ್ಯದಲ್ಲಿ ವಿದ್ಯುತ್ ಹೊರೆ ಸರಿದೂಗಿಸುವ ಸಲುವಾಗಿ. |
| **ಹಾದು ಹೋಗುವ ಪ್ರದೇಶ:** | ಜೋಡಿಗುಬ್ಬಿ, ಅಜ್ಜೂರು, ಯಲಗತಹಳ್ಳಿ, ಯಗಟಿ, ಮೊರಹೊಳು, ಹೆತ್ತಗೋಡನಹಳ್ಳಿ, ಬೈಚನಹಳ್ಳಿ. |
| **ಅಂದಾಜು ವೆಚ್ಚ** | ರೂ. 56.00 ಲಕ್ಷ. |

ಮೇಲಿನ ಯೋಜನೆಯನ್ನು ಕಾರ್ಯರೂಪಕ್ಕೆ ತರಲು ಭಾರತೀಯ ಟೆಲಿಗ್ರಾಫ್ ಅಧಿನಿಯಮ 1985(13) ರಲ್ಲಿ ಉಪಲಭ್ಯವಾಗಿರುವ ಎಲ್ಲಾ ಅಧಿಕಾರವನ್ನು ಕವಿಪ್ರನಿನಿ ಹೊಂದಿರುವುದು, ಮತ್ತು ಅಧಿಕಾರವನ್ನು ಕವಿಪ್ರನಿನಿ ಚಲಾಯಿಸುವುದು. ಈ ಯೋಜನೆಯ ಬಗೆಗೆ ಏನಾದರೂ ಆಕ್ಷೇಪಣೆಗಳು ಇದ್ದಲ್ಲಿ ಅದನ್ನು ಈ ಪ್ರಕಟಣೆಯ ದಿನಾಂಕದಿಂದ ಎರಡು ತಿಂಗಳೊಳಗಾಗಿ **ಕಾರ್ಯಪಾಲಕ ಇಂಜಿನಿಯರ್ (ವಿ), ಬೃಹತ್ ಕಾಮಗಾರಿ ವಿಭಾಗ, ಕವಿಪ್ರನಿನಿ, ಹಾಸನ** ಇವರಿಗೆ ಸಲ್ಲಿಸಬೇಕಾಗಿ ವಿನಂತಿ.

ಪಿ.ಡಿ. 98 ಕಾರ್ಯನಿರ್ವಾಹಕ ಇಂಜಿನಿಯರ್ (ವಿ), ಬೃಕಾವಿ/ಕವಿಪ್ರನಿನಿ/ಹಾಸನ.

**ಯೋಜನಾ ನಿರ್ದೇಶಕರ ಕಛೇರಿ, ಸುಜಲಾ ಜಲಾನಯನ ಯೋಜನೆ ಜಲಾನಯನ ಅಭಿವೃದ್ಧಿ ಇಲಾಖೆ**
**8ನೇ ಮಹಡಿ, ಕರ್ನಾಟಕ ಗೃಹ ಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು,**
**ಸಂಖ್ಯೆ.ವಿಶ್ವ ಬ್ಯಾಂಕ್/ಸುಜಯೋ/ಆಡಳಿತ-1/ಮಾಹಿತಿ ಹಕ್ಕು/2005-06, ದಿನಾಂಕ: 14ನೇ ಸೆಪ್ಟೆಂಬರ್ 2005**
**ಅಧಿಸೂಚನೆ**

ವಿಷಯಃ ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005ರ ಅನ್ವಯ ಜಲಾನಯನ ಅಭಿವೃದ್ಧಿ ಇಲಾಖೆಯ ಸುಜಲಾ ಜಲಾನಯನ ಯೋಜನೆಯಡಿಯಲ್ಲಿ ಸಾರ್ವಜನಿಕ ಪ್ರಾಧಿಕಾರ, ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸುವ ಬಗ್ಗೆ .

ಉಲ್ಲೇಖಃ 1. ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005.
2. ಸರ್ಕಾರದ ಪತ್ರದ ಸಂಖ್ಯೆಃಕೃತೋಇ-59 ಕೃತೋಸ 2005. ದಿನಾಂಕ 8.9.2005.

ಉಲ್ಲೇಖ (1)ರ ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005, (2005 ರ ಕೇಂದ್ರ ಕಾಯಿದೆ ಸಂ.22) ಜಾರಿಯಲ್ಲಿ ಬಂದಿದ್ದು, ಅಧಿನಿಯಮದ ಕಂಡಿಕೆ-5(1), 5(2) ಮತ್ತು 19(1) ರ ಅನ್ವಯ ಜಲಾನಯನ ಅಭಿವೃದ್ಧಿ ಇಲಾಖೆಯಲ್ಲಿ ವಿಶ್ವ ಬ್ಯಾಂಕ್ ನೆರವಿನ ಸುಜಲಾ ಜಲಾನಯನ ಯೋಜನೆಯಡಿಯಲ್ಲಿ ಈ ಕೆಳಕಂಡಂತೆ ಸಾರ್ವಜನಿಕ ಪ್ರಾಧಿಕಾರ, ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೂ ನೇಮಕಾತಿ ಮಾಡಿ ಆದೇಶಿಸಲಾಗಿದೆ.

| ಕ್ರ. ಸಂ. | ಸಾರ್ವಜನಿಕ ಪ್ರಾಧಿಕಾರಗಳ ಕಛೇರಿಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| | | **ಕೇಂದ್ರ ಕಛೇರಿ** | | |
| 1 | ಯೋಜನಾ ನಿರ್ದೇಶಕರು ಹಾಗೂ ಸರ್ಕಾರದ ಪದನಿಮಿತ್ತ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕೆ ಇಲಾಖೆ, ಸುಜಲಾ ಜಲಾನಯನ ಯೋಜನೆ ಜಲಾನಯನ ಅಭಿವೃದ್ಧಿ ಇಲಾಖೆ ಬೆಂಗಳೂರು. | ಅಪರ ಯೋಜನಾ ನಿರ್ದೇಶಕರು (ಸಮನ್ವಯ) ಸುಜಲಾ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ ಕಾವೇರಿ ಭವನ ಬೆಂಗಳೂರು | ಅಧೀನ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕಾ ಇಲಾಖೆ, ಸುಜಲಾ ಜಲಾನಯನ ಯೋಜನೆ, ಬೆಂಗಳೂರು | ಯೋಜನಾ ನಿರ್ದೇಶಕರು ಹಾಗೂ ಪದನಿಮಿತ್ತ ಕಾರ್ಯದರ್ಶಿಗಳು, ಕೃಷಿ ಮತ್ತು ತೋಟಗಾರಿಕಾ ಇಲಾಖೆ, ಸುಜಲ ಜಲಾನಯನ ಅಭಿವೃದ್ಧಿ ಯೋಜನೆ, ಬೆಂಗಳೂರು. |
| | | **ಜಿಲ್ಲಾ ಮಟ್ಟದ ಕಛೇರಿಗಳು** | | |
| 1 | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ತುಮಕೂರು. | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ತುಮಕೂರು | ತಾಂತ್ರಿಕ ಸಹಾಯಕರು (ಕೃಷಿ ಅಧಿಕಾರಿಗಳು) ತುಮಕೂರು. | ಅಪರ ಯೋಜನಾ ನಿರ್ದೇಶಕರು (ಸಮನ್ವಯ), ಸುಜಲಾ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು |
| 2 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ತುಮಕೂರು. | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಜಲಾನಯನ ಅಭಿವೃದ್ಧಿ ಇಲಾಖೆ, ತುಮಕೂರು | ವಲಯ ಅರಣ್ಯ ಸಂರಕ್ಷಣಾಧಿಕಾರಿಗಳು, ತುಮಕೂರು | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ತುಮಕೂರು. |
| 3 | ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ,ಜಲಾನಯನ ಅಭಿವೃದ್ಧಿ ಇಲಾಖೆ, ತುಮಕೂರು. | ಸಹಾಯಕ ತೋಟಗಾರಿಕಾ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ತುಮಕೂರು | ಸಹಾಯಕ ತೋಟಗಾರಿಕೆ ಅಧಿಕಾರಿಗಳು, ತುಮಕೂರು | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ತುಮಕೂರು. |
| 4 | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ತುಮಕೂರು. | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ತುಮಕೂರು. | ರೇಖಾಗಾರರು ಹಾಗೂ ತಾಂತ್ರಿಕ ಸಹಾಯಕರು, ತುಮಕೂರು. | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ತುಮಕೂರು. |
| 5 | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ಕೋಲಾರ | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಕೋಲಾರ | ತಾಂತ್ರಿಕ ಸಹಾಯಕರು (ಕೃಷಿ ಅಧಿಕಾರಿಗಳು) ಕೋಲಾರ | ಅಪರ ಯೋಜನಾ ನಿರ್ದೇಶಕರು (ಸಮನ್ವಯ), ಸುಜಲಾ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು |
| 6 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ,ಕೋಲಾರ | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಜಲಾನಯನ ಅಭಿವೃದ್ಧಿ ಇಲಾಖೆ,ಕೋಲಾರ | ವಲಯ ಅರಣ್ಯ ಸಂರಕ್ಷಣಾಧಿಕಾರಿಗಳು, ಕೋಲಾರ | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಕೋಲಾರ |

| ಕ್ರ. ಸಂ. | ಸಾರ್ವಜನಿಕ ಪ್ರಾಧಿಕಾರಗಳ ಕಛೇರಿಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 7 | ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ,ಕೋಲಾರ | ಸಹಾಯಕ ತೋಟಗಾರಿಕಾ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ,ಕೋಲಾರ | ಸಹಾಯಕ ತೋಟಗಾರಿಕೆ ಅಧಿಕಾರಿಗಳು, ಕೋಲಾರ | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಕೋಲಾರ |
| 8 | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಕೋಲಾರ | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಕೋಲಾರ | ರೇಖಾಗಾರರು ಹಾಗೂ ತಾಂತ್ರಿಕ ಸಹಾಯಕರು, ಕೋಲಾರ | ಯೋಜನಾಧಿಕಾರಿಗಳು,ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಕೋಲಾರ |
| 9 | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ಧಾರವಾಡ. | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಧಾರವಾಡ | ತಾಂತ್ರಿಕ ಸಹಾಯಕರು (ಕೃಷಿ ಅಧಿಕಾರಿಗಳು) ಧಾರವಾಡ. | ಅಪರ ಯೋಜನಾ ನಿರ್ದೇಶಕರು (ಸಮನ್ವಯ), ಸುಜಲಾ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು |
| 10 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಧಾರವಾಡ. | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಜಲಾನಯನ ಅಭಿವೃದ್ಧಿ ಇಲಾಖೆ, ಧಾರವಾಡ. | ವಲಯ ಅರಣ್ಯ ಸಂರಕ್ಷಣಾಧಿಕಾರಿಗಳು, ಧಾರವಾಡ. | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಧಾರವಾಡ. |
| 11 | ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಧಾರವಾಡ. | ಸಹಾಯಕ ತೋಟಗಾರಿಕಾ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಧಾರವಾಡ. | ಸಹಾಯಕ ತೋಟಗಾರಿಕೆ ಅಧಿಕಾರಿಗಳು, ಧಾರವಾಡ. | ಯೋಜನಾಧಿಕಾರಿಗಳು,ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಧಾರವಾಡ. |
| 12 | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಧಾರವಾಡ. | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಧಾರವಾಡ. | ರೇಖಾಗಾರರು ಹಾಗೂ ತಾಂತ್ರಿಕ ಸಹಾಯಕರು, ಧಾರವಾಡ. | ಯೋಜನಾಧಿಕಾರಿಗಳು,ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಧಾರವಾಡ. |
| 13 | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ರಾಣಿಬೆನ್ನೂರು (ಹಾವೇರಿ ) | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ರಾಣಿಬೆನ್ನೂರು (ಹಾವೇರಿ) | ತಾಂತ್ರಿಕ ಸಹಾಯಕರು (ಕೃಷಿ ಅಧಿಕಾರಿಗಳು) ರಾಣಿಬೆನ್ನೂರು (ಹಾವೇರಿ) | ಅಪರ ಯೋಜನಾ ನಿರ್ದೇಶಕರು (ಸಮನ್ವಯ), ಸುಜಲಾ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು |
| 14 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು (ಹಾವೇರಿ ) | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು (ಹಾವೇರಿ ) | ವಲಯ ಅರಣ್ಯ ಸಂರಕ್ಷಣಾಧಿಕಾರಿಗಳು, ರಾಣಿಬೆನ್ನೂರು (ಹಾವೇರಿ) | ಯೋಜನಾಧಿಕಾರಿಗಳು,ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ರಾಣಿಬೆನ್ನೂರು (ಹಾವೇರಿ) |
| 15 | ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು (ಹಾವೇರಿ ) | ಸಹಾಯಕ ತೋಟಗಾರಿಕಾ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು (ಹಾವೇರಿ ) | ಸಹಾಯಕ ತೋಟಗಾರಿಕೆ ಅಧಿಕಾರಿಗಳು, ರಾಣಿಬೆನ್ನೂರು (ಹಾವೇರಿ) | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ರಾಣಿಬೆನ್ನೂರು (ಹಾವೇರಿ) |
| 16 | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು (ಹಾವೇರಿ ) | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು (ಹಾವೇರಿ) | ರೇಖಾಗಾರರು ಹಾಗೂ ತಾಂತ್ರಿಕ ಸಹಾಯಕರು, ರಾಣಿಬೆನ್ನೂರು (ಹಾವೇರಿ) | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ರಾಣಿಬೆನ್ನೂರು (ಹಾವೇರಿ) |
| 17 | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ಚಿತ್ರದುರ್ಗ | ಯೋಜನಾಧಿಕಾರಿಗಳು ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಚಿತ್ರದುರ್ಗ | ತಾಂತ್ರಿಕ ಸಹಾಯಕರು (ಕೃಷಿ ಅಧಿಕಾರಿಗಳು) ಚಿತ್ರದುರ್ಗ | ಅಪರ ಯೋಜನಾ ನಿರ್ದೇಶಕರು (ಸಮನ್ವಯ), ಸುಜಲಾ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು |
| 18 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ,ಚಿತ್ರದುರ್ಗ | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಜಲಾನಯನ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ | ವಲಯ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿತ್ರದುರ್ಗ | ಯೋಜನಾಧಿಕಾರಿಗಳು ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಚಿತ್ರದುರ್ಗ |

| ಕ್ರ. ಸಂ. | ಸಾರ್ವಜನಿಕ ಪ್ರಾಧಿಕಾರಗಳ ಕಛೇರಿಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 19 | ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ,ಚಿತ್ರದುರ್ಗ | ಸಹಾಯಕ ತೋಟಗಾರಿಕಾ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು ಚಿತ್ರದುರ್ಗ | ಸಹಾಯಕ ತೋಟಗಾರಿಕೆ ಅಧಿಕಾರಿಗಳು, ಚಿತ್ರದುರ್ಗ | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಚಿತ್ರದುರ್ಗ |
| 20 | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಚಿತ್ರದುರ್ಗ | ರೇಖಾಗಾರರು ಹಾಗೂ ತಾಂತ್ರಿಕ ಸಹಾಯಕರು, ಚಿತ್ರದುರ್ಗ | ಯೋಜನಾಧಿಕಾರಿಗಳು,ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಚಿತ್ರದುರ್ಗ |
| 21 | ಯೋಜನಾಧಿಕಾರಿಗಳು ಹಾಗೂ ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ಮಧುಗಿರಿ | ಯೋಜನಾಧಿಕಾರಿಗಳು ಹಾಗೂ ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಮಧುಗಿರಿ | ತಾಂತ್ರಿಕ ಸಹಾಯಕರು (ಕೃಷಿ ಅಧಿಕಾರಿಗಳು) ಮಧುಗಿರಿ | ಅಪರ ಯೋಜನಾ ನಿರ್ದೇಶಕರು (ಸಮನ್ವಯ), ಸುಜಲಾ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು |
| 22 | ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ,ಜಲಾನಯನ ಅಭಿವೃದ್ಧಿ ಇಲಾಖೆ, ಮಧುಗಿರಿ | ಸಹಾಯಕ ತೋಟಗಾರಿಕಾ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು ಮಧುಗಿರಿ | ಸಹಾಯಕ ತೋಟಗಾರಿಕೆ ಅಧಿಕಾರಿಗಳು, ಮಧುಗಿರಿ | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಮಧುಗಿರಿ |
| 23 | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಮಧುಗಿರಿ | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಮಧುಗಿರಿ | ರೇಖಾಗಾರರು ಹಾಗೂ ತಾಂತ್ರಿಕ ಸಹಾಯಕರು, ಮಧುಗಿರಿ | ಯೋಜನಾಧಿಕಾರಿಗಳು,ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಮಧುಗಿರಿ |
| 24 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ,ಜಲಾನಯನ ಅಭಿವೃದ್ಧಿ ಇಲಾಖೆ, ಮಧುಗಿರಿ | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಜಲಾನಯನ ಅಭಿವೃದ್ಧಿ ಇಲಾಖೆ, ಮಧುಗಿರಿ | ವಲಯ ಅರಣ್ಯ ಸಂರಕ್ಷಣಾಧಿಕಾರಿಗಳು, ಮಧುಗಿರಿ | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಮಧುಗಿರಿ |
| 25 | ಯೋಜನಾಧಿಕಾರಿಗಳು ಹಾಗೂ ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳ ಕಛೇರಿ, ಚಿಕ್ಕಬಳ್ಳಾಪುರ | ಯೋಜನಾಧಿಕಾರಿಗಳು ಹಾಗೂ ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಚಿಕ್ಕಬಳ್ಳಾಪುರ | ತಾಂತ್ರಿಕ ಸಹಾಯಕರು (ಕೃಷಿ ಅಧಿಕಾರಿಗಳು) ಚಿಕ್ಕಬಳ್ಳಾಪುರ | ಅಪರ ಯೋಜನಾ ನಿರ್ದೇಶಕರು (ಸಮನ್ವಯ), ಸುಜಲಾ ಜಲಾನಯನ ಯೋಜನೆ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು |
| 26 | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ,ಚಿಕ್ಕಬಳ್ಳಾಪುರ | ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು, ಜಲಾನಯನ ಅಭಿವೃದ್ಧಿ ಇಲಾಖೆ,ಚಿಕ್ಕಬಳ್ಳಾಪುರ | ವಲಯ ಅರಣ್ಯ ಸಂರಕ್ಷಣಾಧಿಕಾರಿಗಳು, ಚಿಕ್ಕಬಳ್ಳಾಪುರ | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಚಿಕ್ಕಬಳ್ಳಾಪುರ |
| 27 | ಸಹಾಯಕ ತೋಟಗಾರಿಕಾ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ,ಚಿಕ್ಕಬಳ್ಳಾಪುರ | ಸಹಾಯಕ ತೋಟಗಾರಿಕಾ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ರಾಣಿಬೆನ್ನೂರು ಚಿಕ್ಕಬಳ್ಳಾಪುರ | ಸಹಾಯಕ ತೋಟಗಾರಿಕೆ ಅಧಿಕಾರಿಗಳು, ಚಿಕ್ಕಬಳ್ಳಾಪುರ | ಯೋಜನಾಧಿಕಾರಿಗಳು, ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಚಿಕ್ಕಬಳ್ಳಾಪುರ |
| 28 | ಸಹಾಯಕ ಕೃಷಿ ನಿರ್ದೇಶಕರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಚಿಕ್ಕಬಳ್ಳಾಪುರ | ಸಹಾಯಕ ಕೃಷಿ ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಚಿಕ್ಕಬಳ್ಳಾಪುರ | ರೇಖಾಗಾರರು ಹಾಗೂ ತಾಂತ್ರಿಕ ಸಹಾಯಕರು, ಚಿಕ್ಕಬಳ್ಳಾಪುರ | ಯೋಜನಾಧಿಕಾರಿಗಳು,ಸುಜಲಾ ಜಲಾನಯನ ಯೋಜನೆ ಹಾಗೂ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿಗಳು, ಚಿಕ್ಕಬಳ್ಳಾಪುರ |

ಮುಂದುವರೆದು, ಈ ಪತ್ರಕ್ಕೆ ಕರ್ನಾಟಕ ಸರ್ಕಾರದ ಸಚಿವಾಲಯ ಪತ್ರ ಸಂಖ್ಯೆ: ಕೃತೋಇ 59 ಕೃತೋಸ 2005 ದಿನಾಂಕ: 08.09.2005, ಸಿಬ್ಬಂದಿ ಮತ್ತು ಆಡಳಿತ ಇಲಾಖೆ (ಜನಸ್ಪಂದನ ಕೋಶ) ಪತ್ರ ಸಂಖ್ಯೆ : ಸಿಆಸುಇ : 136 :: ಆರ್ ಟಿ ಐ: 2005 ದಿನಾಂಕ 30.08.2005, ಕರ್ನಾಟಕ ಸರ್ಕಾರದ ಟಿಪ್ಪಣಿ, The Gazette of India ದಿನಾಂಕ : 21.06.2005 ರ ಪ್ರತಿಗಳನ್ನು ಲಗತ್ತಿಸುತ್ತಾ ಸದರಿ ಪತ್ರಗಳಲ್ಲಿ ಕೇಂದ್ರ ಸರ್ಕಾರದ ಮಾಹಿತಿ ಹಕ್ಕು ಕಾಯ್ದೆ 2005 ಅನುಷ್ಠಾನದ ಪರಾಮರ್ಶೆ ಕುರಿತು ವಿವರಿಸಿರುವ ಅಂಶಗಳನ್ನು ತಪ್ಪದೇ ಪಾಲಿಸಲು ಸೂಚಿಸಲಾಗಿದೆ.

ಟಿಪ್ಪಣಿ ಅಪರ ಯೋಜನಾ ನಿರ್ದೇಶಕರು (ಸಮನ್ವಯ)
ಇವರಿಂದ ಅನುಮೋದಿಸಲ್ಪಟ್ಟಿದೆ.
ಪಿ.ಆರ್. 1626

ಯೋಜನಾ ನಿರ್ದೇಶಕರ ಪರವಾಗಿ
ಸುಜಲ ಜಲಾನಯನ ಯೋಜನೆ,
ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು.

ಆಯುಕ್ತರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, 7ನೇ ಮಹಡಿ, ಕರ್ನಾಟಕ ಗೃಹ ಮಂಡಳಿ ಕಟ್ಟಡ, ಕಾವೇರಿ ಭವನ, ಬೆಂಗಳೂರು
ಸಂಖ್ಯೆ.ಜಲಅಇ.ಆಡಳಿತ/ವಿನಿ-6/15-ಭಾಗ-2/2005-06, ದಿನಾಂಕ: 20ನೇ ಸೆಪ್ಟೆಂಬರ್ 2005

ಅಧಿಸೂಚನೆ

**ವಿಷಯ:** ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005 ರ ಅನ್ವಯ ಜಲಾನಯನ ಅಭಿವೃದ್ಧಿ ಇಲಾಖೆಯಲ್ಲಿ ಸಾರ್ವಜನಿಕ ಪ್ರಾಧಿಕಾರ, ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ನೇಮಿಸುವ ಬಗ್ಗೆ .

**ಉಲ್ಲೇಖ:** 1. ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005
2. ಸರ್ಕಾರದ ಪತ್ರದ ಸಂಖ್ಯೆ:ಕೃತೋಇ-59 ಕೃತೋಸ 2005, ದಿನಾಂಕ: 8.9.2005.

ಉಲ್ಲೇಖ(1)ರ ಭಾರತ ಸರ್ಕಾರದ ಮಾಹಿತಿ ಹಕ್ಕು ಅಧಿನಿಯಮ 2005, (2005 ರ ಕೇಂದ್ರ ಕಾಯಿದೆ ಸಂ.22) ಜಾರಿಯಲ್ಲಿ ಬಂದಿರುತ್ತದೆ. ಈ ಅಧಿನಿಯಮದ ಕಂಡಿಕೆ-5(1), 5(2) ಮತ್ತು 19(1) ರನ್ವಯ ಜಲಾನಯನ ಅಭಿವೃದ್ಧಿ ಇಲಾಖೆಗೆ ಸಂಬಂಧಿಸಿದಂತೆ ಸಾರ್ವಜನಿಕ ಪ್ರಾಧಿಕಾರ, ಸಾರ್ವಜನಿಕ ಮಾಹಿತಿ ಅಧಿಕಾರಿ, ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ ಹಾಗೂ ಮೇಲ್ಮನವಿ ಪ್ರಾಧಿಕಾರಿಗಳನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹಾಗೂ ಮುಂದಿನ ಆದೇಶದವರೆಗೆ ನೇಮಕಾತಿ ಮಾಡಿ ಆದೇಶಿಸಲಾಗಿದೆ.

| ಕ್ರ. ಸಂ. | ಸಾರ್ವಜನಿಕ ಪ್ರಾಧಿಕಾರಗಳ ಕಛೇರಿಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| | | ಕೇಂದ್ರ ಕಛೇರಿ | | |
| 1 | ಆಯುಕ್ತರ ಕಛೇರಿ, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು | ನಿರ್ದೇಶಕರು ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು | ಜಂಟಿ ನಿರ್ದೇಶಕರು (ಆಡಳಿತ) ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು | ಆಯುಕ್ತರು ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| | | ಜಿಲ್ಲಾ ಮಟ್ಟದ ಕಛೇರಿಗಳು | | |
| 1 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬೆಂಗಳೂರು ಜಿಲ್ಲೆ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಬೆಂಗಳೂರು-1 | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬೆಂಗಳೂರು ಜಿಲ್ಲೆ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 2 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಮುಂಡಗೋಡ ಉತ್ತರ ಕನ್ನಡ ಜಿಲ್ಲೆ. | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಮುಂಡಗೋಡ ಉತ್ತರ ಕನ್ನಡ ಜಿಲ್ಲೆ. | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಮುಂಡಗೋಡ ಉತ್ತರ ಕನ್ನಡ ಜಿಲ್ಲೆ. | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 3 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ತುಮಕೂರು. | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ತುಮಕೂರು | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ತುಮಕೂರು | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 4 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ರಾಯಚೂರು | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ರಾಯಚೂರು | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ರಾಯಚೂರು | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 5 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಮಂಡ್ಯ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಮಂಡ್ಯ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಮಂಡ್ಯ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 6 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಕೋಲಾರ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಕೋಲಾರ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಕೋಲಾರ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 7 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಹಾಸನ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಹಾಸನ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಹಾಸನ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 8 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಉಡುಪಿ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಉಡುಪಿ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಉಡುಪಿ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 9 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಶಿವಮೊಗ್ಗ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಶಿವಮೊಗ್ಗ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಶಿವಮೊಗ್ಗ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 10 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬಾಗಲಕೋಟೆ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಬಾಗಲಕೋಟೆ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬಾಗಲಕೋಟೆ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |

| ಕ್ರ. ಸಂ. | ಸಾರ್ವಜನಿಕ ಪ್ರಾಧಿಕಾರಗಳ ಕಛೇರಿಗಳು | ಸಾರ್ವಜನಿಕ ಮಾಹಿತಿ ಅಧಿಕಾರಿ | ಸಹಾಯಕ ಸಾರ್ವಜನಿಕ ಮಾಹಿತಿ ಅಧಿಕಾರಿ | ಮೇಲ್ಮನವಿ ಪ್ರಾಧಿಕಾರ |
|---|---|---|---|---|
| 11 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಧಾರವಾಡ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಧಾರವಾಡ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಧಾರವಾಡ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 12 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಮೈಸೂರು | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಮೈಸೂರು | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಮೈಸೂರು | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 13 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಕೊಪ್ಪಳ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಕೊಪ್ಪಳ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಕೊಪ್ಪಳ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 14 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ರಾಣಿಬೆನ್ನೂರು (ಹಾವೇರಿ ) | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ರಾಣಿಬೆನ್ನೂರು (ಹಾವೇರಿ) | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ರಾಣಿಬೆನ್ನೂರು (ಹಾವೇರಿ) | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 15 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಗುಲ್ಬರ್ಗ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಗುಲ್ಬರ್ಗ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಗುಲ್ಬರ್ಗ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 16 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಗದಗ್ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಗದಗ್ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಗದಗ್ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 17 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ದಾವಣಗೆರೆ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ದಾವಣಗೆರೆ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ದಾವಣಗೆರೆ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 18 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಚಿಕ್ಕಮಗಳೂರು | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಚಿಕ್ಕಮಗಳೂರು | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಚಿಕ್ಕಮಗಳೂರು | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 19 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬಿಜಾಪುರ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಬಿಜಾಪುರ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬಿಜಾಪುರ. | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 20 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬಳ್ಳಾರಿ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಬಳ್ಳಾರಿ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬಳ್ಳಾರಿ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 21 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬೆಳಗಾಂ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಬೆಳಗಾಂ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 22 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಚಿತ್ರದುರ್ಗ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಚಿತ್ರದುರ್ಗ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಚಿತ್ರದುರ್ಗ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 23 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬೀದರ್ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಬೀದರ್ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಬೀದರ್ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 24 | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಚಾಮರಾಜನಗರ | ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ, ಚಾಮರಾಜನಗರ | ತಾಂತ್ರಿಕ ಸಹಾಯಕ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಚಾಮರಾಜನಗರ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 25 | ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಮಧುಗಿರಿ | ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ದಿ ಅಧಿಕಾರಿ, ಮಧುಗಿರಿ | ತಾಂತ್ರಿಕ ಸಹಾಯಕ ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಮಧುಗಿರಿ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |
| 26 | ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಚಿಕ್ಕಬಳ್ಳಾಪುರ | ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ದಿ ಅಧಿಕಾರಿ, ಚಿಕ್ಕಬಳ್ಳಾಪುರ | ತಾಂತ್ರಿಕ ಸಹಾಯಕ ಹೆಚ್ಚುವರಿ ಜಿಲ್ಲಾ ಜಲಾನಯನ ಅಭಿವೃದ್ಧಿ ಅಧಿಕಾರಿ ಕಛೇರಿ, ಚಿಕ್ಕಬಳ್ಳಾಪುರ | ನಿರ್ದೇಶಕರು, ಜಲಾನಯನ ಅಭಿವೃದ್ಧಿ ಇಲಾಖೆ, ಬೆಂಗಳೂರು. |

